RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ನವೆಂಬರ್ ೧೪, ೨೦೧೩ (ಕಾರ್ತೀಕ ೨೩, ಶಕ ವರ್ಷ ೧೯೩೫)<br>Bangalore, Thursday, November 14, 2013 (Karthika 23, Shaka Varsha 1935) | ಸಂಚಿಕೆ ೪೫<br>Issue 45 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ,**

**1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಸಿಸಿಡಬ್ಲ್ಯೂ/ಸಿಆರ್-26/2013-14, ಬೆಂಗಳೂರು, ದಿನಾಂಕ 29-07-2013**

1976ರ ಕರ್ನಾಟಕ ವೃತ್ತಿಗಳು, ವ್ಯಾಪಾರಗಳು, ಅಜೀವಿಕೆಗಳು ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮದ ಪ್ರಕರಣ 6(A)ರ, ಉಪಪ್ರಕರಣ (2)ರ ಪರಂತುಕದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೂಲಕ ಅಧಿಸೂಚಿಸುವುದೇನೆಂದರೆ 2013ರ ಆಗಸ್ಟ್ 16ನೇ ದಿನದಿಂದ ಅನ್ವಯವಾಗುವಂತೆ ಸದರಿ ಅಧಿನಿಯಮದ ಪ್ರಕರಣ 6(A)ರ, ಉಪಪ್ರಕರಣ (1)ರ ಅಡಿಯಲ್ಲಿ ಸಲ್ಲಿಸಬೇಕಾದ ಹೇಳಿಕೆಯ ಆಧಾರದ ಮೇಲೆ ಐದು ಸಾವಿರ (5,000) ರೂಪಾಯಿಗಳಿಗಿಂತ ಕಡಿಮೆ ಇಲ್ಲದ ತೆರಿಗೆಯನ್ನು ಸಂದಾಯ ಮಾಡಲು ಬಾಧ್ಯತೆ ಹೊಂದಿದ ಪ್ರತಿಯೊಬ್ಬ ಉದ್ಯೋಗದಾತನು ಇಂಟರ್‌ನೆಟ್ ಮೂಲಕ ವಿದ್ಯುನ್ಮಾನ ಪಾವತಿಯನ್ನು ಈ ಕೆಳಕಂಡ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು:-

1. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ಉದ್ಯೋಗದಾತನು ಜಾಲತಾಣ (web-site) https://vat.kar.nic.in/epay ಅನ್ನು ತೆರೆಯಬೇಕು ಅಥವಾ ಜಾಲತಾಣ https://ctax.kar.nic.in ನಲ್ಲಿ ಇರುವ 'e-Payment (All Acts)' ಎನ್ನುವ ಸಂಪರ್ಕದ ಮೇಲೆ Click ಮಾಡಬೇಕು. ಸದರಿ ಜಾಲತಾಣ ಮುಕ್ತ ಜಾಲತಾಣವಾಗಿದ್ದು, ಬಳಕೆದಾರನ ಅಧಿಕೃತತೆಯ ಅವಶ್ಯವಿರುವುದಿಲ್ಲ.
2. ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ಎಂಟು ತೆರಿಗೆಗಳ ಪಟ್ಟಿಯಲ್ಲಿ ಕರ್ನಾಟಕ ವೃತ್ತಿ ತೆರಿಗೆ ಅಧಿನಿಯಮವನ್ನು ತೆರಿಗೆ ಪ್ರವರ್ಗವೆಂದಾಗಿ ಆಯ್ಕೆ ಮಾಡಿ ಅದರ ಮೇಲೆ Click ಮಾಡಿ.
3. ನಿಮ್ಮ ನೋಂದಣಿ ಸಂಖ್ಯೆಯನ್ನು ನಮೂದಿಸಿರಿ. ಸಂಬಂಧಿತ ತಂತ್ರಾಂಶ ಸದರಿ ನೋಂದಣಿ ಸಂಖ್ಯೆಯ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳುತ್ತದೆ ಮತ್ತು ನೋಂದಣಿದಾರನ ಹೆಸರು, ವಿಳಾಸ ಮತ್ತು ಅವನು/ಅವಳು ನೋಂದಾಯಿತರಾದ ಕಛೇರಿಯ ವಿವರಗಳು ತಂತಾನೇ ಪ್ರದರ್ಶಿತವಾಗುತ್ತದೆ.
4. ತೆರಿಗೆ ಅವಧಿ, ತೆರಿಗೆ ಅಥವಾ ಇತರೆ ಮೊತ್ತ, ಬಡ್ಡಿ, ದಂಡ ಮುಂತಾದ ವಿವರಗಳನ್ನು ನಿಗದಿ ಮಾಡಿರುವ ಸಂಬಂಧಿತ ಆವರಣಗಳಲ್ಲಿ ನಮೂದಿಸಿ.
5. ಉದ್ಯೋಗದಾತನು ನೆಟ್ ಬ್ಯಾಂಕಿಂಗ್ ಸೌಲಭ್ಯವಿರುವ ಖಾತೆ ಹೊಂದಿದ ಮತ್ತು ಇ-ಪಾವತಿಗೆ ಸಮರ್ಥಗೊಳಿಸಿದ ಬ್ಯಾಂಕ್‌ಗಳಲ್ಲಿ ಒಂದನ್ನು ಜಾರು ಪಟ್ಟಿ (Drop down List) ಯಿಂದ ಆಯ್ಕೆ ಮಾಡಿ ಮತ್ತು 'NEXT' ಎನ್ನುವುದರ ಮೇಲೆ Click ಮಾಡಿ.

6. ಗಣಕಯಂತ್ರದ ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ವಿವರಗಳನ್ನು ಪರಿಶೀಲಿಸಿ ಮತ್ತು ಅಂತಹ ವಿವರಗಳನ್ನು ದೃಢೀಕರಿಸಿಕೊಂಡು ನಂತರ 'Submit' ಎನ್ನುವುದರ ಮೇಲೆ Click ಮಾಡಿ. ಈ ವಿವರಗಳನ್ನು ಗಣಕಯಂತ್ರ ವ್ಯವಸ್ಥೆ ದಾಖಲಿಸುತ್ತದೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ (CTD Reference Number) ಎಂದು ಕರೆಯಲಾಗುವ ಒಂದು ವಿಶಿಷ್ಟ ಸಂಖ್ಯೆ ಪ್ರದರ್ಶಿತವಾಗುತ್ತದೆ. ಈ ವಿಶಿಷ್ಟ ಸಂಖ್ಯೆಯನ್ನು ಭವಿಷ್ಯದ ಬಳಕೆಗಾಗಿ ಬರೆದಿಟ್ಟುಕೊಳ್ಳತಕ್ಕದ್ದು.

7. ನಂತರ ಗಣಕಯಂತ್ರ ವ್ಯವಸ್ಥೆಯು ನಮೂದಿತ ಪಾವತಿ ಮೊತ್ತದ ವಿವರಗಳನ್ನು ಆಯ್ಕೆ ಮಾಡಿದ ಬ್ಯಾಂಕಿನ ಜಾಲತಾಣಕ್ಕೆ ವರ್ಗಾಯಿಸುತ್ತದೆ ಮತ್ತು ಆ ಬ್ಯಾಂಕಿನ ಜಾಲತಾಣವನ್ನು ತೆರೆಯುತ್ತದೆ.

8. ಬ್ಯಾಂಕಿನ ಜಾಲತಾಣದ ಸಂಪರ್ಕ ಪುಟವು ತೆರೆದುಕೊಳ್ಳುತ್ತದೆ. ಉದ್ಯೋಗದಾತನು ತನ್ನ ವಿವರಗಳನ್ನು ಮತ್ತು ಅಂತಹ ಬ್ಯಾಂಕ್ ಒದಗಿಸಿದ ಬಳಕೆದಾರನ ಹೆಸರು ಮತ್ತು ಸಂಕೇತ ಪದಗಳನ್ನು ಉಪಯೋಗಿಸಿ ಅದನ್ನು ಅಧಿಕೃತಗೊಳಿಸತಕ್ಕದ್ದು.

9. ಈಗ ಬ್ಯಾಂಕಿನ ಜಾಲತಾಣವು "ತೆರಿಗೆ ಪ್ರವರ್ಗ", "ನೋಂದಣಿ ಸಂಖ್ಯೆ", "ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ" (CTD Reference Number) ಮತ್ತು "ಮೊಬಲಗು" (Amount) ಗಳನ್ನು ಪ್ರದರ್ಶಿಸುತ್ತದೆ. ಈ ಹಂತದಲ್ಲಿ ಪಾವತಿ ವಿವರಗಳನ್ನು ಮಾರ್ಪಾಡು ಮಾಡಲು ಅವಕಾಶವಿರುವುದಿಲ್ಲ.

10. "Confirm the Payment" ಎನ್ನುವುದರ ಮೇಲೆ ಉದ್ಯೋಗದಾತನು Click ಮಾಡಿದ ನಂತರ Core Banking ವ್ಯವಸ್ಥೆಯಲ್ಲಿ ವಹಿವಾಟು ನಡೆಯುತ್ತದೆ.

11. ಪಾವತಿ ಪ್ರಕ್ರಿಯೆ ಪೂರ್ಣಗೊಂಡ ನಂತರ, ಬ್ಯಾಂಕಿನ ಜಾಲತಾಣದ ಸಂಪರ್ಕ ವಾಣಿಜ್ಯ ತೆರಿಗೆ ಇಲಾಖೆಯ ಜಾಲತಾಣಕ್ಕೆ ವರ್ಗಾಯಿಸಲ್ಪಡುತ್ತದೆ. ಬ್ಯಾಂಕಿನ ಉಲ್ಲೇಖ ಸಂಖ್ಯೆಯನ್ನು ಒಳಗೊಂಡಂತೆ ಯಶಸ್ವಿ ಪಾವತಿಯ ವಿವರಗಳನ್ನು ಜಾಲತಾಣ https://vat.kar.nic.in/epay ಪ್ರದರ್ಶಿಸುತ್ತದೆ.

12. "ಪ್ರಿಂಟ್ ಚಲನ್" (Print Challan) ಎಂಬುವುದರ ಮೇಲೆ Click ಮಾಡಿ ಮುದ್ರಿತ ಚಲನ್‌ನ್ನು ಪಡೆಯಬಹುದಾಗಿದೆ.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ https://vat.kar.nic.in/epay ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

**ಅಜಯ್ ಸೇಠ್,**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**PR. 2271**
**SC. 100**

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ,**

**1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಸಿಸಿಡಬ್ಲ್ಯೂ/ಸಿಆರ್-25/2013-14, ಬೆಂಗಳೂರು, ದಿನಾಂಕ 29-07-2013**

1958ರ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮದ ಪ್ರಕರಣ 6(A)ರ ಉಪಪ್ರಕರಣ (1 -A)ರ ಪರಂತುಕ ಮತ್ತು ಪ್ರಕರಣ 9ರ ಉಪಪ್ರಕರಣ 1ರ ಪರಂತುಕದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೂಲಕ ಅಧಿಸೂಚಿಸುವುದೇನೆಂದರೆ 2013ರ ಆಗಸ್ಟ್ 16ನೇ ದಿನದಿಂದ ಅನ್ವಯವಾಗುವಂತೆ, ಪ್ರದರ್ಶನ ಅಥವಾ ವಿನೋದ ಅಥವಾ ಉತ್ಸವ ಅಥವಾ ಆ್ಯಂಟೆನಾ/ಕೇಬಲ್ ಟೆಲಿವಿಷನ್‌ಗಳ ಮುಖಾಂತರ ಒದಗಿಸುವ ಮನರಂಜನೆಯನ್ನು ಹೊರತುಪಡಿಸಿ ಇನ್ನುಳಿದ ಯಾವುದೇ ಮನರಂಜನೆಗಳಿಗೆ ಸದರಿ ಅಧಿನಿಯಮದಡಿಯಲ್ಲಿ ಹತ್ತು ಸಾವಿರ (10,000) ರೂಪಾಯಿಗಳಿಗಿಂತ ಕಡಿಮೆ ಇಲ್ಲದ ಮೊತ್ತದ ತೆರಿಗೆ ಅಥವಾ ಯಾವುದೇ ಮೊಬಲಗನ್ನು ಸಂದಾಯ ಮಾಡಲು ಬಾಧ್ಯತೆ ಇರುವ ಪ್ರತಿಯೊಬ್ಬ ಮಾಲೀಕನು ಅಂತಹ ಮೊಬಲಗನ್ನು ಇಂಟರ್‌ನೆಟ್ ಮೂಲಕ ವಿದ್ಯುನ್ಮಾನ ಪಾವತಿಯನ್ನು ಈ ಕೆಳಕಂಡ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು:-

1. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ಮಾಲೀಕನು ಜಾಲತಾಣ (web-site) https://vat.kar.nic.in/epay ಅನ್ನು ತೆರೆಯಬೇಕು ಅಥವಾ ಜಾಲತಾಣ https://ctax.kar.nic.in ನಲ್ಲಿ ಇರುವ 'e-Payment (All Acts)' ಎನ್ನುವ ಸಂಪರ್ಕದ ಮೇಲೆ Click ಮಾಡಬೇಕು. ಸದರಿ ಜಾಲತಾಣ ಮುಕ್ತ ಜಾಲತಾಣವಾಗಿದ್ದು, ಬಳಕೆದಾರನ ಅಧಿಕೃತತೆಯ ಅವಶ್ಯವಿರುವುದಿಲ್ಲ.

2. ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ಎಂಟು ತೆರಿಗೆಗಳ ಪಟ್ಟಿಯಲ್ಲಿ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮವನ್ನು ತೆರಿಗೆ ಪ್ರವರ್ಗವೆಂದಾಗಿ ಆಯ್ಕೆ ಮಾಡಿ ಅದರ ಮೇಲೆ Click ಮಾಡಿ.

3. ಪರವಾನಿಗೆ (Permit) ಸಂಖ್ಯೆಯನ್ನು ನಮೂದಿಸಿರಿ. ಸಂಬಂಧಿತ ತಂತ್ರಾಂಶ ಸದರಿ ಪರವಾನಿಗೆ (Permit) ಸಂಖ್ಯೆಯ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳುತ್ತದೆ ಮತ್ತು ಪರವಾನಿಗೆ ಪಡೆದವರ ಹೆಸರು, ವಿಳಾಸ ಮತ್ತು ಅವನು/ಅವಳು ಪರವಾನಿಗೆ ಪಡೆದ ಕಛೇರಿಯ ವಿವರಗಳು ತಂತಾನೇ ಪ್ರದರ್ಶಿತವಾಗುತ್ತದೆ.

4. ತೆರಿಗೆ ಅವಧಿ, ತೆರಿಗೆ (ಪ್ರವೇಶದ ಮೇಲಿನ ತೆರಿಗೆ, ಪ್ರದರ್ಶನ ತೆರಿಗೆ, ಇತರೆ ತೆರಿಗೆಗಳು) ಅಥವಾ ಇತರೆ ಮೊತ್ತ, ಬಡ್ಡಿ, ದಂಡ ಮುಂತಾದ ವಿವರಗಳನ್ನು ನಿಗದಿ ಮಾಡಿರುವ ಸಂಬಂಧಿತ ಆವರಣಗಳಲ್ಲಿ ನಮೂದಿಸಿ.

5. ಮಾಲೀಕನು ನೆಟ್ ಬ್ಯಾಂಕಿಂಗ್ ಸೌಲಭ್ಯವಿರುವ ಖಾತೆ ಹೊಂದಿದ ಮತ್ತು ಇ–ಪಾವತಿಗೆ ಸಮರ್ಥಗೊಳಿಸಿದ ಬ್ಯಾಂಕ್‌ಗಳಲ್ಲಿ ಒಂದನ್ನು ಜಾರು ಪಟ್ಟಿ (Drop down List) ಯಿಂದ ಆಯ್ಕೆ ಮಾಡಿ ಮತ್ತು 'NEXT' ಎನ್ನುವುದರ ಮೇಲೆ Click ಮಾಡಿ.

6. ಗಣಕಯಂತ್ರದ ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ವಿವರಗಳನ್ನು ಪರಿಶೀಲಿಸಿ ಮತ್ತು ಅಂತಹ ವಿವರಗಳನ್ನು ದೃಢೀಕರಿಸಿಕೊಂಡು ನಂತರ 'Submit' ಎನ್ನುವುದರ ಮೇಲೆ Click ಮಾಡಿ. ಈ ವಿವರಗಳನ್ನು ಗಣಕಯಂತ್ರ ವ್ಯವಸ್ಥೆ ದಾಖಲಿಸುತ್ತದೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ (CTD Reference Number) ಎಂದು ಕರೆಯಲಾಗುವ ಒಂದು ವಿಶಿಷ್ಟ ಸಂಖ್ಯೆ ಪ್ರದರ್ಶಿತವಾಗುತ್ತದೆ. ಈ ವಿಶಿಷ್ಟ ಸಂಖ್ಯೆಯನ್ನು ಭವಿಷ್ಯದ ಬಳಕೆಗಾಗಿ ಬರೆದಿಟ್ಟುಕೊಳ್ಳತಕ್ಕದ್ದು.

7. ನಂತರ ಗಣಕಯಂತ್ರ ವ್ಯವಸ್ಥೆಯು ನಮೂದಿತ ಪಾವತಿ ಮೊತ್ತದ ವಿವರಗಳನ್ನು ಆಯ್ಕೆ ಮಾಡಿದ ಬ್ಯಾಂಕಿನ ಜಾಲತಾಣಕ್ಕೆ ವರ್ಗಾಯಿಸುತ್ತದೆ ಮತ್ತು ಆ ಬ್ಯಾಂಕಿನ ಜಾಲತಾಣವನ್ನು ತೆರೆಯುತ್ತದೆ.

8. ಬ್ಯಾಂಕಿನ ಜಾಲತಾಣದ ಸಂಪರ್ಕ ಪುಟವು ತೆರೆದುಕೊಳ್ಳುತ್ತದೆ. ಮಾಲೀಕನು ತನ್ನ ವಿವರಗಳನ್ನು ಮತ್ತು ಅಂತಹ ಬ್ಯಾಂಕ್ ಒದಗಿಸಿದ ಬಳಕೆದಾರನ ಹೆಸರು ಮತ್ತು ಸಂಕೇತ ಪದಗಳನ್ನು ಉಪಯೋಗಿಸಿ ಅದನ್ನು ಅಧಿಕೃತಗೊಳಿಸತಕ್ಕದ್ದು.

9. ಈಗ ಬ್ಯಾಂಕಿನ ಜಾಲತಾಣವು "ತೆರಿಗೆ ಪ್ರವರ್ಗ", "ಪರವಾನಿಗೆ (Permit) ಸಂಖ್ಯೆ", "ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ" (CTD Reference Number) ಮತ್ತು "ಮೊಬಲಗು" (Amount) ಗಳನ್ನು ಪ್ರದರ್ಶಿಸುತ್ತದೆ. ಈ ಹಂತದಲ್ಲಿ ಪಾವತಿ ವಿವರಗಳನ್ನು ಮಾರ್ಪಾಡು ಮಾಡಲು ಅವಕಾಶವಿರುವುದಿಲ್ಲ.

10. "Confirm the Payment" ಎನ್ನುವುದರ ಮೇಲೆ ಮಾಲೀಕನು Click ಮಾಡಿದ ನಂತರ Core Banking ವ್ಯವಸ್ಥೆಯಲ್ಲಿ ವಹಿವಾಟು ನಡೆಯುತ್ತದೆ.

11. ಪಾವತಿ ಪ್ರಕ್ರಿಯೆ ಪೂರ್ಣಗೊಂಡ ನಂತರ, ಬ್ಯಾಂಕಿನ ಜಾಲತಾಣದ ಸಂಪರ್ಕ ವಾಣಿಜ್ಯ ತೆರಿಗೆ ಇಲಾಖೆಯ ಜಾಲತಾಣಕ್ಕೆ ವರ್ಗಾಯಿಸಲ್ಪಡುತ್ತದೆ. ಬ್ಯಾಂಕ್ ಉಲ್ಲೇಖ ಸಂಖ್ಯೆಯನ್ನು ಒಳಗೊಂಡಂತೆ ಯಶಸ್ವಿ ಪಾವತಿಯ ವಿವರಗಳನ್ನು ಜಾಲತಾಣ https://vat.kar.nic.in/epay ಪ್ರದರ್ಶಿಸುತ್ತದೆ.

12. "ಪ್ರಿಂಟ್ ಚಲನ್" (Print Challan) ಎಂಬುವುದರ ಮೇಲೆ Click ಮಾಡಿ ಮುದ್ರಿತ ಚಲನ್‌ನ್ನು ಪಡೆಯಬಹುದಾಗಿದೆ.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ https://vat.kar.nic.in/epay ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

**ಅಜಯ್ ಸೇಠ್,**
ವಾಣಿಜ್ಯ ತೆರಿಗೆಗಳ ಆಯುಕ್ತರು,
ಕರ್ನಾಟಕ, ಬೆಂಗಳೂರು.

**PR. 2272**
**SC. 100**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003,

**Sub :** KVAT Act, 2003 – Clarification under Section 59(4) regarding the rate of tax applicable on 'Polypropylene woven sacks' –reg.

**Ref :** Application dated 13-08-2013 of M/s IPC Packaging Company Pvt. Ltd., Bangalore. (TIN-29270804236).

In the application cited above of M/s IPC Packaging Company Pvt. Ltd., No. 4909, 9th Floor, High Point-IV, 45, Palace Road, Bangalore-560001 has sought clarification regarding the rate of tax applicable on 'Polypropylene woven sacks'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR. CR. 69/13-14, DATED 18-09-2013**

It is clarified that 'Polypropylene woven sacks' are liable to tax at 5.5% with effect from 01-08-2012 under entry Sl. No. 51 of the Third Schedule to the KVAT Act, 2003 read with Sl.No. 145 of the Table in the Notification-IV No. FD 197 CSL 2005, dated 30-04-2005.

**AJAY SETH,**
Commissioner of Commercial Taxes
(Karnataka), Bangalore.

**PR. 2273**
**SC. 100**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ನಅಇ 182 ಬೆಮಪ್ರಾ 2013, ಬೆಂಗಳೂರು, ದಿನಾಂಕ 01–10–2013

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5 ರಡಿಯಲ್ಲಿ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬೆಳಗಾವಿ ಜಿಲ್ಲೆ, ಚಿಕ್ಕೋಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗವನ್ನು ಗುರುತಿಸಲು ದಿನಾಂಕ 01.06.2013 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 2292**
**SC. 50**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 236 ಎಲ್‌ಆರ್‌ಎ 2012, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್, 2013

ಕಾರ್ಯದರ್ಶಿ, ಸೊಸೈಟಿ ಆಫ್ ದಿ ಸಿಸ್ಟರ್ಸ್ ಆಫ್ ದಿ ಚಾರಿಟಿ ಆಫ್ ಸೆಂಟ್ ವಿನ್ಸೆಂಟ್ ಡಿ ಪಾಲ್, ಬೆಂಗಳೂರು ಇವರಿಗೆ, ಬೆಂಗಳೂರು ದಕ್ಷಿಣ ತಾಲ್ಲೂಕು, ಹುಳಿಮಾವು ಗ್ರಾಮದ ರಿ.ಸರ್ವೆ ನಂ. 64/4ರಲ್ಲಿ 0–38, ಸ.ನಂ. 65/3ರಲ್ಲಿ 0–24 ಹಾಗೂ 65/3ರಲ್ಲಿ 0–25 ಗುಂಟೆ ಒಟ್ಟು 02–07 ಎ/ಗುಂಟೆ ಕೃಷಿ ಭೂಮಿಯನ್ನು ವೃದ್ಧಾಶ್ರಮ ಉದ್ದೇಶಕ್ಕಾಗಿ ಹೊಂದಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಜಮೀನನ್ನು ಯಾವ ಉದ್ದೇಶಕ್ಕಾಗಿ ಹೊಂದಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, (1961)ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ, ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, (1964)ರ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅಂತಹ ಜಮೀನನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 2288**

**SC 20**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 02 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2013

ಮೆ॥ ವೆನ್‌ಹಿಟ್ ಸ್ಪೈಕ್ಸ್ ಕ್ರೈಸಿಸ್ ಮ್ಯಾನೇಜ್‌ಮೆಂಟ್ ಪ್ರೈ ಲಿ., ಬೆಂಗಳೂರು ಇವರಿಗೆ ಕನಕಪುರ ತಾಲ್ಲೂಕು, ಕಸಬಾ ಹೋಬಳಿ, ಶಿವನಹಳ್ಳಿ ಗ್ರಾಮದ ಸ.ನಂ. 268 ರಲ್ಲಿ 0–26 ಎ/ಗು 269/1ರಲ್ಲಿ 2–36 ಎ/ಗು ಹಾಗೂ 269/2ರಲ್ಲಿ 1–30 ಎ/ಗು ಹೀಗೆ ಒಟ್ಟು 5–12 ಎ/ಗುಂ ಜಮೀನನ್ನು ಪತ್ರ ಸಂಖ್ಯೆ: ರಾ.ಜಿ.ಕ./ಎಲ್‌ಆರ್‌ಎಫ್/ಸಿಆರ್/07/2011–12, ದಿನಾಂಕ : 22–11–2012 ಹಾಗೂ ಪತ್ರ ಸಂಖ್ಯೆ: ರಾ.ಜಿ.ಕ/ಎಲ್‌ಆರ್‌ಎಫ್/ಸಿಆರ್/08/2011–12, ದಿನಾಂಕ: 22–11–2012ರಲ್ಲಿ ಶಿವನಹಳ್ಳಿ ಗ್ರಾಮದ ಸ.ನಂ. 267ರಲ್ಲಿ 29–21 ಎ/ಗು ಪೈಕಿ 9–28 ಎ/ಗು ಎರಡು ಪ್ರಸ್ತಾವನೆಗಳು ಸೇರಿ ಒಟ್ಟು 15.00 ಎ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿ, ಜಿಲ್ಲಾಧಿಕಾರಿ, ರಾಮನಗರ ಇವರು ಪ್ರಸ್ತಾವನೆ ಸಲ್ಲಿಸಿದ್ದರು. ಸದರಿ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಈ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳು/ಕಾಯ್ದೆಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.

7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 2290**

**SC 20**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 80 ಎಲ್‌ಆರ್‌ಎಂ 2011, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್, 2013**

ಜಗದ್ಗುರು ಶ್ರೀ ವೀರಸಿಂಹಾಸನ ಮಹಾಸಂಸ್ಥಾನ ಮಠ, ಸುತ್ತೂರು, ಇವರಿಗೆ ನಂಜನಗೂಡು ತಾಲ್ಲೂಕು, ಸುತ್ತೂರು ಗ್ರಾಮದ ಸ.ನಂ. 255/2, 300/1 ಹಾಗೂ 305/3ರಲ್ಲಿ ಒಟ್ಟು 3 ಎಕರೆ 08 ಗುಂಟೆ, ಬೆಳಗುಂದ ಗ್ರಾಮದ ಸ.ನಂ. 581,59 ಮತ್ತು 60 ರಲ್ಲಿ 8 ಎಕರೆ 09 ಗುಂಟೆ ಹಾಗೂ ಕುಪ್ಪರವಳ್ಳಿ ಗ್ರಾಮದ ಸ.ನಂ. 85/ಪಿ10, 105/ಪಿ14 ಹಾಗೂ 106/ಪಿ15 ರಲ್ಲಿ 6.18 ಎಕರೆ ಒಟ್ಟು 17 ಎಕರೆ 35 ಗುಂಟೆ ಜಮೀನನ್ನು ಧಾರ್ಮಿಕ ಹಾಗೂ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಹೊಂದಲು ಜಿಲ್ಲಾಧಿಕಾರಿಗಳು, ಮೈಸೂರು ರವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಎಸ್‌ಪಿಎಲ್/04/2011–12, ದಿನಾಂಕ: 25–01–2012ರಲ್ಲಿ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109 (1ಎ)ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಈ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳು/ಕಾಯ್ದೆಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.
7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

P.R. 2291

SC 20

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 93 ಸೇಸಕಿ 13, ಬೆಂಗಳೂರು, ದಿನಾಂಕ: 04ನೇ ಜುಲೈ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ : 15–11–2010ರಲ್ಲಿ ದಿನಾಂಕ: 01–01–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ: 26–02–2013ರ ಪತ್ರದಲ್ಲಿ ಶ್ರೀ ಜಿ. ಸುರೇಶ್, ಕಿರಿಯ ಇಂಜಿನಿಯರ್, ಇವರು ಅನುಕಂಪದ ಆಧಾರದ ಮೇಲೆ ದಿನಾಂಕ: 17–06–1992ರಂದು ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು ಸರ್ಕಾರದ ಆದೇಶ ಸಂಖ್ಯೆ: ಲೋಇ:185:ಸೇಸಕಿ:95 ದಿನಾಂಕ: 29–12–1995ರಲ್ಲಿ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ: 11–06–97ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾಪಟ್ಟಿಯಲ್ಲಿ ಇವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಅನುಸಾರ ಬಿ.ಇ. ಪದವಿ ಪಡೆದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿದಲ್ಲಿ ನಿಯಮಗಳಂತೆ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು

ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08, ದಿನಾಂಕ: 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ: 12–10–95ರಿಂದ ಪರಿಗಣಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕಲ್ಪಿಸಿರುವ ಅವಕಾಶದಂತೆ, ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಮುಂದಿನ ಹುದ್ದೆಯಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3ನೇ ಭಾಗ ಗರಿಷ್ಠ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಠತೆಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ಜಿ. ಸುರೇಶ್, ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ: 17–06–92ರಿಂದ 11–06–97ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ : 12–10–95ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ : ಲೋಇ 98 ಸೇಸಕಿ 08, ದಿನಾಂಕ: 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮಸಂಖ್ಯೆ 3461– A ರಲ್ಲಿ ಕೆಳಕಂಡಂತೆ ನಿಗದಿಪಡಿಸಿ ಸೇರ್ಪಡೆ ಮಾಡಲು ಉದ್ದೇಶಿಸಿದೆ.

| Ranking No. | Previous AE. GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3461-A | - | G. SURESH. | - | 14-07-64 | 17-06-1992 | 11-06-1997<br>12-10-1995* | CC |

*He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ಮನವಿಗಳಿದ್ದಲ್ಲಿ, ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2276**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

### ಸಂಖ್ಯೆ: ಲೋಇ 195 ಸೇಸಕಿ 13, ಬೆಂಗಳೂರು, ದಿನಾಂಕ: 03ನೇ ಜುಲೈ, 2013

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆಯಲ್ಲಿ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಸ್. ರವಿಕುಮಾರ್, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 3547ಕ್ಕೆ ಬದಲಾಗಿ ಕ್ರಮಸಂಖ್ಯೆ 3514–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| **Ranking No.** | **Previous AE GRD No.** | **Name of the Engineer** | **SC/ST** | **Date of Birth** | **Date of Entry into service** | **Date of Regular Appointment to the cadre** | **Remarks** |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3514-A | - | RAVIKUMAR S. | - | 29-04-65 | 03-12-94 | 24-04-96 | CC |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2277**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಲೋಇ 130 ಸೇಸಕಿ 13, ಬೆಂಗಳೂರು, ದಿನಾಂಕ: 03ನೇ ಜುಲೈ, 2013**

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆಯಲ್ಲಿ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಪಿ.ಕೆ. ಜೋಶಿ, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 3436ಕ್ಕೆ ಬದಲಾಗಿ ಕ್ರಮಸಂಖ್ಯೆ 3511–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| Ranking No. | Provision AE GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3511-A | - | JOSHI P K | - | 20-05-61 | 01-04-1986 | 01-04-1996 | DWR |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2278**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಲೋಇ 134 ಸೇಸಕಿ 13, ಬೆಂಗಳೂರು, ದಿನಾಂಕ: 02ನೇ ಜುಲೈ, 2013**

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜಿ. ಉಮೇಶ್, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 3403ಕ್ಕೆ ಬದಲಾಗಿ ಕ್ರಮಸಂಖ್ಯೆ 3245–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| Ranking No. | Previous AE GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3245-A | 6501 | G UMESH | - | 04-06-1964 | 30-11-1990 | 21-05-1994 | CC |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2279**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ಸಂಖ್ಯೆ: ಲೋಇ 192 ಸೇಸಕಿ 13, ಬೆಂಗಳೂರು, ದಿನಾಂಕ: 02ನೇ ಜುಲೈ, 2013**

### ತಿದ್ದುಪಡಿ ಅಧಿಸೂಚನೆ

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜೆ. ಮದನಮೋಹನ್, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 3137ಕ್ಕೆ ಬದಲಾಗಿ ಕ್ರಮ ಸಂಖ್ಯೆ 2892–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| Ranking No. | Previous AE GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 2892-A | 6430 | MADANA MOHAN J | - | 25-04-61 | 19-11-86 | 23-12-89 | CC |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2280**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 250 ಸೇಸಕಿ 12, ಬೆಂಗಳೂರು, ದಿನಾಂಕ: 20ನೇ ಜೂನ್, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ : 15–11–2010ರಲ್ಲಿ ದಿನಾಂಕ: 01–01–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಶ್ರೀ ಎ. ಚಂದ್ರಶೇಖರ್, ಸಹಾಯಕ ಇಂಜಿನಿಯರ್, ಇವರು ದಿನಾಂಕ: 08–03–88ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು, 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ: ನೀಇ:522:ಪಿಡಬ್ಲ್ಯೂಸಿ:2000, ದಿನಾಂಕ 27–01–2001 ಆದೇಶದಲ್ಲಿ 08–03–98ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08, ದಿನಾಂಕ: 15–11–2010ರಲ್ಲಿ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ 3674– A ರಲ್ಲಿ ನಿಗದಿಪಡಿಸಲು ಉದ್ದೇಶಿಸಿ ಸೇರ್ಪಡೆ ಮಾಡಿ ತಿದ್ದುಪಡಿಯ ಕರಡು ಅಧಿಸೂಚನೆಯನ್ನು ಸಂಖ್ಯೆ: ಲೋಇ 250:ಸೇಸಕಿ:12 ದಿನಾಂಕ 15–04–2013ರಲ್ಲಿ ಹೊರಡಿಸಿ ಬಾದಿತರಾಗಬಹುದಾದ ಅಧಿಕಾರಿ/ನೌಕರರುಗಳಿಂದ ಆಕ್ಷೇಪಣೆ ಸಲಹೆ/ಮನವಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು.

ಸದರಿ ಅಧಿಸೂಚನೆಯು ದಿನಾಂಕ: 15–04–2013ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿತಗೊಂಡಿದ್ದು, ಈ ಸಂಬಂಧ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ/ಸಲಹೆ ಮನವಿಗಳು ಸ್ವೀಕೃತವಾಗಿರುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ : ಲೋಇ:98:ಸೇಸಕಿ:08 ದಿನಾಂಕ : 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎ. ಚಂದ್ರಶೇಖರ್, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮಸಂಖ್ಯೆ 3674–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಿ ಅಂತಿಮಗೊಳಿಸಿ ಹೊರಡಿಸಲಾಗಿದೆ.

| Ranking No. | Provision AE. GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3674-A | - | CHANDRASHEKAR A. | - | 29-06-65 | 08-03-88 | 08-03-98 | DWR |

ಸದರಿ ಸೇರ್ಪಡೆಯು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯ ಪ್ರಕರಣಗಳು ಬಾಕಿ ಇದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪಿನ ಮೇರೆಗೆ ಪುನರ್ ಪರಿಷ್ಕರಣೆಗೆ ಒಳಪಟ್ಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2281**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಲೋಇ 123 ಸೇಸಕಿ 13, ಬೆಂಗಳೂರು, ದಿನಾಂಕ: 20ನೇ ಜೂನ್, 2013**

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಟಿ.ಸಿ. ರವಿಕುಮಾರ್, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 3908ಕ್ಕೆ ಬದಲಾಗಿ ಕ್ರಮಸಂಖ್ಯೆ 3900–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| Ranking No. | Provision AE GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3900-A | - | T.C. RAVIKUMAR | - | 01-06-67 | 15-10-2001 | 05-06-2002<br>19-03-2002* | CC |

*He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2282**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಲೋಇ 90 ಸೇಸಕಿ 13, ಬೆಂಗಳೂರು, ದಿನಾಂಕ: 12ನೇ ಜೂನ್, 2013**

ಸರ್ಕಾರದ ಕ್ರಮಾಂಕ : ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಬಿ.ಆರ್. ಗೋವಿಂದರಾಜು, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು ಕ್ರಮಸಂಖ್ಯೆ 2953ಕ್ಕೆ ಬದಲಾಗಿ ಕ್ರಮಸಂಖ್ಯೆ 2912–A ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| Ranking No. | Previous AE GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 2912-A | 6246 | GOVINDARAJU B R | - | 30-03-66 | 27-07-88 | 19-07-90 | CC |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2283**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 135 ಸೇಸಕಿ 13, ಬೆಂಗಳೂರು, ದಿನಾಂಕ: 27ನೇ ಜೂನ್, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ : 15–11–2010ರಲ್ಲಿ ದಿನಾಂಕ: 01–01–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ: 26–03–2013ರ ಪತ್ರದಲ್ಲಿ ಶ್ರೀ ನಾಗಶೆಟ್ಟಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ: 12–12–86ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು, ದಿನಾಂಕ : 11–12–96ಕ್ಕೆ 10 ವರ್ಷಗಳ ಸೇವೆ ಪೂರೈಸಿದ್ದು, ನಂತರ ಅವರ ಸೇವೆಯನ್ನು ಸಂಖ್ಯೆ: ನೀಇ:132:ಪಿಡಬ್ಲ್ಯೂಸಿ:97, ದಿನಾಂಕ 20–05–97ರಲ್ಲಿ ದಿನಾಂಕ: 12–12–96ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08, ದಿನಾಂಕ: 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಲೋಇ:98:ಸೇಸಕಿ:08 ದಿನಾಂಕ : 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ನಾಗಶೆಟ್ಟಿ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮಸಂಖ್ಯೆ 3579–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No. | Provision AE. GRD No. | Name of the Engineer | SC/ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3579-A | - | NAGASHETTY | - | 10-05-60 | 12-12-86 | 12-12-96 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ಮನವಿಗಳಿದ್ದಲ್ಲಿ, ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2284**
**SC 100**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

### ಸಂಖ್ಯೆ: ಲೋಇ 173 ಸೇಸಕಿ 13, ಬೆಂಗಳೂರು, ದಿನಾಂಕ: 05ನೇ ಜುಲೈ, 2013

ಸರ್ಕಾರದ ಕ್ರಮಾಂಕ: ಲೋಇ:98:ಸೇಸಕಿ:08 ದಿನಾಂಕ : 15–11–2010ರ ಅಧಿಸೂಚನೆ ಜೊತೆ ಪ್ರಚುರಪಡಿಸಿರುವ ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ರಘು ವಿ, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು 3609ಕ್ಕೆ ಬದಲಾಗಿ ಕ್ರಮಸಂಖ್ಯೆ 3511–B ಎಂದು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| **Ranking No.** | **Previous AE GRD No.** | **Name of the Engineer** | **SC/ST** | **Date of Birth** | **Date of Entry into service** | **Date of Regular Appointment to the cadre** | **Remarks** |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3511-B | 6559 | RAGHU V. | - | 18-07-71 | 19-08-93 | 01-04-96 | CC |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಆರ್. ಮೋಹನ್ ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ).

**PR 2285**
**SC 100**

## PROCEEDINGS OF ASSISTANT COMMISSIONER OF COMMERCIAL TAXES,

**LVO-420, BAGALKOT**

**Date : 29th May, 2013.**

Present : Shri Shivanand Albal, ACCT, LVO-420

**Sub :** Loss of Form-C in case of M/s Sadashiva Sugars Ltd. NH-13 post : Nagaral Nainegall, Taluk & Dist. Bagalkot.

**Ref :** M/s Sadashiva Sugars Ltd. Letter SSL/ACC/2012-13/327 dt. 07-09-2012.

**Preamble :**

M/s Sadashiva Sugars Ltd. NH-13, Post : Nagaral Nainegall, Taluk & Dist. Bagalkot is a registered dealer holding TIN 29130472670, engaged in the business of manufacturing of sugar, intimated this office (vide letter under reference) that the Form-C bearing Sl. No. G21/458951 for Rs. 10,23,626-00 for the FY 2006-07, has been lost in the custody of selling dealer M/s Thermax Ltd., D-13 M.I.D.C. Industrial Area, RD Aga Road, Chinchwad, PUNE. M/s Sadashiva Sugars Ltd. Requested this office to issue duplicate Form-C in lieu of Form-C issued from the office of the Assistant Commissioner of Commercial Taxes, LVO-420 Bagalkot to M/s Sadashiva Sugars Ltd.

M/s Thermax Ltd. Pune issued paper notification in the two local newspapers and filed an F.I.R. at jurisdictional Police station. The said dealer has also filed indemnity Bond in Form-G at the jurisdictional Sales Tax Office, Pune, as per Rule 12(2) of CST (R & T) Rules, 1957 and the same authority has permitted the dealer to obtain duplicate Form-C in lieu of lost Form-C M/s Thermax has also furnished to this office the photocopy of local newspaper advertisement, F.I.R. Indemnity Bond and the letter of permission from Sales Tax Office, Pune to obtain duplicate Form-C.

Hence this Order.

**ORDER NO. ACCT/LVO-420/BGK/C FORM/01/2013-14, DATED : 25-05-2013.**

In view of the circumstances explained above, the said C-Form bearing Sl No. G21/458951 for Rs. 10,23,626-00 dated 26-04-2007 issued by this office to M/s Sadashiva Sugars Ltd. NH-13, post : Nagaral Nainegall, Talku & Dist. Bagalkot (Karnataka) is lost in the custody of selling dealer M/s Thermax Ltd. D-13 M.I.D.C. Industrial Area, RD Aga Road, Chinchwad, PUNE, is treated as invalid with immediate effect.

**Asst. Commissioner of Commercial Taxes**

LVO-420, Bagalkot.

## OFFICE OF THE ASSISTANT COMMISSIONER OF COMMERCIAL TAXES, LVO-420, BAGALKOT

**NOTIFICATION**

**Notified authority under Rule 6(i) of the CST (Karnataka) Rules, 1957.**

By virture of provisions of Rule 12(2) of the CST (R & T) Rules 1957, it is hereby notified for General information that the declaration in Form-C shown below is declared to be lost in the custody of selling dealer and also to be invalid.

| Number (including code No.) of declaration Form lost/destroyed/stolen | Name & address of the dealer to whom declaration Form C is issued by the department | Registration Certificate of the dealer under CST Act 1956 | Date of issue of Form C by the department | Amount for which Form C is issued | Remarks |
|---|---|---|---|---|---|
| G21/458951 | M/s Sadashiva Sugars Ltd. NH-13, post : Nagaral Nainegall, Taluk & Dist. Bagalkot (Karnataka) | 29130472670 | 26-04-2007 | 1023626-00 | Form C is lost in the custody of selling dealer M/s Thermax Ltd. D-13 M.I.D.C. Industrial Area, RD Aga Road, Chinchwad, PUNE |

**PR-2260**

**SC 100**

**Asst. Commissioner of Commercial Taxes**

LVO-420, Bagalkot.

## COMMISSIONER OF COMMERCIAL TAXES IN KARNATAKA

## VTK, Gandhinagar, Bangalore

**NOTIFICATION**

**No. PT.CR.8/2013-14, Dated : 5-9-2013.**

In exercise of the powers conferred by sub-section (1) of Section 7 of the Karnataka Tax on Professions, Trades, Callings and Employment Act, 1976, in the following cases, the employers are notified of the requirement of production of accounts before the Assessing Authority in support of the return filed by them for the year ending 31st March, 2012 :

(1) Employers in whose case non-payment or short payment of tax for any period in the year has been detected on a visit or inspection by any of the departmental authorities ; and

(2) Employers who have deducted and paid tax of five lakh rupees or more and whose ninth digit of the registration number is 1.

**PR-2261**
**SC-100**

**AJAY SETH**
Commissioner of Commercial Taxes
(Karnataka), Bangalore.

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax applicable on 'Precious and Semi Precious Stones'-reg.

**Ref :** Application dated : 22-04-2013 of Sri Abdul Ghaffar Shariff, Proprietor, of M/s Karnataka Gem's and Minerals, Mysore, (TIN-29930061629).

In the application cited above of Sri. Abdul Ghaffar Shariff, Properietor, of M/s Karnataka Gem's and Minerals, # 2339, Ashoka Road, west Cross, #21, Lashkar Mohalla, Mysore-570001 has sought clarification regarding the rate of tax applicable on 'Precious and Semi Precious Stones'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.13/13-14, DATED : 06-09-2013.**

It is clarified that the rates of tax on 'Precious and Semi precious stones' are as mentioned below :

| Sl. No. | Period | Rate of tax/Provision/Notification |
|---|---|---|
| 1 | from 01-04-2005 to 6-06-2005 | 12.5% under Section 4(1)(b) of the Karnataka Value Added Tax Act, 2003. |
| 2 | from 07-06-2005 to 31-03-2011 | 1% as per entry 3 of II Schedule to the Karnataka Value Added Tax Act, 2003. |
| 3 | from 01-04-2011 to 31-03-2012 | 2% in terms of the Notification-V No. FD 35 CSL 2011, dated : 29-03-2011. |
| 4 | from 01-04-2012 on wards | 1% as per the Notification-VI No. FD 57 CSL 2012, dated : 31-03-2012. |

**PR-2262**
**SC-100**

**AJAY SETH**
Commissioner of Commercial Taxes
(Karnataka), Bangalore.

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax applicable on 'Bentonite Sand (Ball clay sand)-reg.

**Ref :** Application dated : 21-08-2013 of M/s Pet Planet, Bangalore-560001 (TIN-29230201306).

In the application cited above of M/s Pet Planet, No. 53, Bowring Hospital Road, Bangalore-560001 has sought clarification regarding the rate of tax applicable on 'Bentonite Sand (Ball clay sand).

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.76/13-14, DATED : 06-09-2013.**

It is clarified that 'Bentonite Sand (Ball clay sand)' which is an un-scheduled goods is liable to tax at 14.5% from 01-08-2012 under section 4(1)(b)(iii) of the Karnataka Value Added Tax Act, 2003.

**PR-2263**
**SC-100**

**AJAY SETH**
Commissioner of Commercial Taxes
(Karnataka), Bangalore.

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax applicable on 'Metal mesh bins and Bin stands'-reg.

**Ref :** Application dated : 06-05-2013 of Sri. Ajaykumar C. Partner, of M/s Padmaja Engineering, Belur-587007. (TIN-29720798799).

In the application cited above of Sri. Ajaykumar C. Partner, of M/s Padmaja Engineering,, Plot No. 40, Road No.-5, KIADB, Belur, Dharwad-580007. has sought clarification regarding the rate of tax applicable on 'Metal mesh bins and Bin stands'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.16/13-14, DATED : 28-08-2013.**

It is clarified that 'Metal mesh bins and Bin stands' which are un-scheduled goods is liable to tax at 14.5% from 01-08-2012 under section 4(1)(b)(iii) of the Karnataka Value Added Tax Act, 2003.

**PR-2264**
**SC-100**

**AJAY SETH**
Commissioner of Commercial Taxes
(Karnataka), Bangalore.

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax applicable on 'used engine oil'-reg.

**Ref :** Application dated : 13-08-2013 of M/s. Karnataka State Road Transport Corporation, Bangalore. (TIN-29090073149).

In the application cited above of M/s Karnataka State Road Transport Corporation, Central Officers : Purchase Branch : K.H. Road, Shanthinagar, Bangalore-560027 has sought clarification regarding the rate of tax applicable on 'used engine oil'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.66/13-14, DATED : 02-09-2013.**

It is clarified that 'used engine oil' sold as waste material is liable to tax at 5.5% with effect from 01-08-2012 as per Sl. No. 63 in terms of Notification-III No. FD 82 CSL 2010, dated 31-03-2010 read with Notification-I No. FD 143 CSL 2012 dated : 31-07-2012 of the Karnataka Valu Added Tax Act, 2003.

**PR-2265**
**SC-100**

**AJAY SETH**
Commissioner of Commercial Taxes
(Karnataka), Bangalore.

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax under composition scheme for works contract-reg.

**Ref :** Application dated : 19-07-2013 of M/s. Srinivasa Builders and Developers, Bangalore. (TIN-29560764937).

In the application cited above of M/s Srinivasa Builders and Developers, No. 179, 1st Cross, Telecom Layout, K.P. Agrahara, Vijayanagar, Bangalore-560023 has sought clarification regarding rate of tax under composition scheme for works contract.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

### CLARIFICATION NO. CLR.CR.53/13-14, DATED : 27-08-2013.

It is clarified that the rate of composition amount payable by a dealer executing works contracts who has opted for composition of tax under section 15(1) of the Karnataka Value Added Tax Act, 2003. is 4% on the total consideration for the works contract executed, in terms of the notification No. FD 116 CSL 2006 (13) dt. 31-03-2006, which is collectable from 01-04-2007.

**PR-2266**
**SC-100**

**AJAY SETH**
Commissioner of Commercial Taxes
(Karnataka), Bangalore.

## OFFICE OF THE ASSISTANT COMMISSIONER OF COMMERCIAL TAXES IN KARNATAKA

**VTK, Gandhinagar, Bangalore.**

**NOTIFICATION**

**No. KTL.CR-4/2013-14, Date : 5-9-2013.**

In exercise of the powers conferred by sub-section (1) of Section 6 of the Karnataka Tax on Luxuries Act, 1979, it is hereby notifed that in the following cases, the proprietors are notified of the requirement of production of accourts in support of the return filed by them for the year ending 31st March 2012 :

(1) Proprietors in whose case non-payment or short payment of tax for any period in the year 2011-12 or 2012-13 has been detected on a visit or inspection by any of the departmental authorities ;

(2) Proprietors who have been assessed in any of the previous two years to an additional tax of twenty five thousand rupees or more than admitted by them in the return filed for the year.

(3) Proprietors in whose case the increase in the amount of tax payable for the year as declared in the return filed as compared to the amount of tax paid or assessed for the previous year is less than 10%.

**PR-2267**
**SC-100**

**AJAY SETH**
Commissioner of Commercial Taxes
(Karnataka), Bangalore.

## ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, 1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು

**ಅಧಿಸೂಚನೆ–III**

**ಸಂಖ್ಯೆ : ಸಿಸಿಡಬ್ಲ್ಯೂ/ಸಿಆರ್–23/2013–14, ಬೆಂಗಳೂರು, ದಿನಾಂಕ : 31–07–2013.**

1979ರ ಕರ್ನಾಟಕ ವಿಲಾಸಿ ತೆರಿಗೆ ಅಧಿನಿಯಮದ ಪ್ರಕರಣ 5ರ ಉಪಪ್ರಕರಣ (1)ರ ಪರಂತುಕದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೂಲಕ ಅಧಿಸೂಚಿಸುವುದೇನೆಂದರೆ ಸದರಿ ಅಧಿನಿಯಮದ ಪ್ರಕರಣ 5ರ ಉಪಪ್ರಕರಣ (1)ರ ಮೇರೆಗೆ ತಕ್ಷಣದಲ್ಲಿ ಜಾರಿಗೆ ಬರುವಂತೆ ಯಾವುದೇ ವರ್ಷಕ್ಕೆ ವರದಿಯನ್ನು ಸಲ್ಲಿಸಬೇಕಾದ ಬಾಧ್ಯತೆಯುಳ್ಳ ಯಾವುದೇ ಮಾಲೀಕನು ಅಂತಹ ವರದಿಯನ್ನು ವಿದ್ಯುನ್ಮಾನ ವಿಧಾನದಲ್ಲಿ ಈ ಕೆಳಕಂಡಂತೆ ಸಲ್ಲಿಸತಕ್ಕದ್ದು.

1. ಈ ಹಿಂದೆ ಬಳಕೆದಾರನ ಹೆಸರು ಮತ್ತು ಸಂಕೇತಪದಗಳನ್ನು ಪಡೆಯದೇ ಇರುವ ಮಾಲೀಕನು ಸಂಬಂಧಪಟ್ಟ ವಿಲಾಸಿ ತೆರಿಗೆ ಅಧಿಕಾರಿಯ ಕಛೇರಿಯಿಂದ ಪಡೆದುಕೊಳ್ಳತಕ್ಕದ್ದು.
2. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ಮಾಲೀಕನು ಜಾಲತಾಣ http://164.100.80.99/lt/ ಅನ್ನು ತೆರೆದು ತಮಗೆ ನೀಡಿರುವ ಬಳಕೆದಾರನ ಹೆಸರು ಮತ್ತು ಸಂಕೇತಪದಗಳನ್ನು ಉಪಯೋಗಿಸಿ ತಮಗೆ ಅನ್ವಯವಾಗುವ ನಮೂನೆ III-C ನಮೂನೆ III-H, ನಮೂನೆ III-M ಅಥವಾ ನಮೂನೆ III-N ರಲ್ಲಿ, ಜಾಲತಾಣದಲ್ಲಿ ಪ್ರಕಟಿಸಿದ ಸೂಚನೆ ಹಾಗೂ ನಿಯಮಗಳ ಪ್ರಕಾರ ವಿದ್ಯುನ್ಮಾನ ವಿಧಾನದಲ್ಲಿ ಪಟ್ಟಿಗಳನ್ನು ಸಲ್ಲಿಸತಕ್ಕದ್ದು.
3. ಸದರಿ ಮಾಲೀಕನು ವಿದ್ಯುನ್ಮಾನ ವಿಧಾನದಲ್ಲಿ ಸಲ್ಲಿಸಿದ ವರದಿಯ ಸಹಿಮಾಡಿದ ಕಾಗದದ ಪ್ರತಿ (Hard Copy) ಯನ್ನು ಸಂಬಂಧಿತ ವರ್ಷ ಮುಗಿದ 75 ದಿನಗಳ ಒಳಗಾಗಿ ಸಲ್ಲಿಸತಕ್ಕದ್ದು.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ http://164.100.80.99/lt/ ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

**PR-2268** **ಅಜಯ್ ಸೇಠ್**

**SC-100** ವಾಣಿಜ್ಯ ತೆರಿಗೆಗಳ ಆಯುಕ್ತರು,

(ಕರ್ನಾಟಕ), ಬೆಂಗಳೂರು.

## ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, 1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು

### ಅಧಿಸೂಚನೆ–I

**ಸಂಖ್ಯೆ : ಸಿಸಿಡಬ್ಲ್ಯೂ/ಸಿಆರ್–23/2013–14, ಬೆಂಗಳೂರು, ದಿನಾಂಕ : 31–07–2013.**

1979ರ ಕರ್ನಾಟಕ ವಿಲಾಸಿ ತೆರಿಗೆ ಅಧಿನಿಯಮದ ಪ್ರಕರಣ 5(A)ರ ಉಪಪ್ರಕರಣ (2)ರ ಪರಂತುಕ ಮತ್ತು ಪ್ರಕರಣ 8ರ ಉಪಪ್ರಕರಣ 1ರ ಪರಂತುಕದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೂಲಕ ಅಧಿಸೂಚಿಸುವುದೇನೆಂದರೆ 2013ರ ಆಗಸ್ಟ್ 16ನೇ ದಿನದಿಂದ ಅನ್ವಯವಾಗುವಂತೆ ಸದರಿ ಅದಿನಿಯಮದಡಿಯಲ್ಲಿ ಹತ್ತು ಸಾವಿರ (10,000) ರೂಪಾಯಿಗಳಿಗಿಂತ ಕಡಿಮೆ ಇಲ್ಲದ ಮೊತ್ತದ ತೆರಿಗೆ ಅಥವಾ ಯಾವುದೇ ಮೊಬಲಗನ್ನು ಸಂದಾಯ ಮಾಡಲು ಬಾಧ್ಯತೆ ಇರುವ ಪ್ರತಿಯೊಬ್ಬ ಮಾಲೀಕನು ಅಂತಹ ಮೊಬಲಗನ್ನು ಇಂಟರ್‌ನೆಟ್ ಮುಖಾಂತರ ವಿದ್ಯುನ್ಮಾನ ಪಾವತಿಯನ್ನು ಈ ಕೆಳಕಂಡ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು :–

1. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ಮಾಲೀಕನು ಜಾಲತಾಣ (web-site) https://vat.kar.nic.in/epay ಅನ್ನು ತೆರೆಯಬೇಕು ಅಥವಾ ಜಾಲತಾಣ https://ctax.kar.nic.in ನಲ್ಲಿ ಇರುವ 'e-Payment (All Acts)' ಎನ್ನುವ ಸಂಪರ್ಕದ ಮೇಲೆ Click ಮಾಡಬೇಕು ಸದರಿ ಜಾಲತಾಣ ಮುಕ್ತ ಜಾಲತಾಣವಾಗಿದ್ದು. ಬಳಕೆದಾರನ ಅಧಿಕೃತತೆಯ ಅವಶ್ಯವಿರುವುದಿಲ್ಲ.
2. ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ಎಂಟು ತೆರಿಗೆಗಳ ಪಟ್ಟಿಯಲ್ಲಿ ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮವನ್ನು ತೆರಿಗೆ ಪ್ರವರ್ಗವೆಂದಾಗಿ ಆಯ್ಕೆ ಮಾಡಿ ಅದರ ಮೇಲೆ Click ಮಾಡಿ.
3. ಪರವಾನಿಗೆ (Permit) ಸಂಖ್ಯೆಯನ್ನು ನಮೂದಿಸಿರಿ. ಸಂಬಂಧಿತ ತಂತ್ರಾಂಶ ಸದರಿ ಪರವಾನಿಗೆ (Permit) ಸಂಖ್ಯೆಯ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳುತ್ತದೆ ಮತ್ತು ಪರವಾನಿಗೆ ಪಡೆದವರ ಹೆಸರು, ವಿಳಾಸ ಮತ್ತು ಅವನು/ಅವಳು ಪರವಾನಿಗೆ ಪಡೆದ ಕಛೇರಿಯ ವಿವರಗಳು ತಂತಾನೇ ಪ್ರದರ್ಶಿತವಾಗುತ್ತದೆ.
4. ತೆರಿಗೆ ಅವಧಿ, ತೆರಿಗೆ ಅಥವ ಇತರೆ ಮೊತ್ತ, ಬಡ್ಡಿ, ದಂಡ ಮುಂತಾದ ವಿವರಗಳನ್ನು ನಿಗದಿ ಮಾಡಿರುವ ಸಂಬಂಧಿತ ಆವರಣಗಳಲ್ಲಿ ನಮೂದಿಸಿ.
5. ಮಾಲೀಕನು ನೆಟ್ ಬ್ಯಾಂಕಿಂಗ್ ಸೌಲಭ್ಯವಿರುವ ಖಾತೆ ಹೊಂದಿದ ಮತ್ತು ಇ–ಪಾವತಿಗೆ ಸಮರ್ಥಗೊಳಿಸಿದ ಬ್ಯಾಂಕ್‌ಗಳಲ್ಲಿ ಒಂದನ್ನು ಜಾರು ಪಟ್ಟಿ (Drop down List) ಯಿಂದ ಆಯ್ಕೆ ಮಾಡಿ ಮತ್ತು 'NEXT' ಎನ್ನುವುದರ ಮೇಲೆ Click ಮಾಡಿ.
6. ಗಣಕಯಂತ್ರದ ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ವಿವರಗಳನ್ನು ಪರಿಶೀಲಿಸಿ ಮತ್ತು ಅಂತಹ ವಿವರಗಳನ್ನು ದೃಢೀಕರಿಸಿಕೊಂಡು ನಂತರ 'Submit' ಎನ್ನುವುದರ ಮೇಲೆ Click ಮಾಡಿ. ಈ ವಿವರಗಳನ್ನು ಗಣಕಯಂತ್ರ ವ್ಯವಸ್ಥೆ ದಾಖಲಿಸುತ್ತದೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ (CTD Reference Number) ಎಂದು ಕರೆಯಲಾಗುವ ಒಂದು ವಿಶಿಷ್ಟ ಸಂಖ್ಯೆ ಪ್ರದರ್ಶಿತವಾಗುತ್ತದೆ. ಈ ವಿಶಿಷ್ಟ ಸಂಖ್ಯೆಯನ್ನು ಭವಿಷ್ಯದ ಬಳಕೆಗಾಗಿ ಬರೆದಿಟ್ಟುಕೊಳ್ಳತಕ್ಕದ್ದು.
7. ನಂತರ ಗಣಕಯಂತ್ರ ವ್ಯವಸ್ಥೆಯು ನಮೂದಿತ ಪಾವತಿ ಮೊತ್ತದ ವಿವರಗಳನ್ನು ಆಯ್ಕೆ ಮಾಡಿದ ಬ್ಯಾಂಕಿನ ಜಾಲತಾಣಕ್ಕೆ ವರ್ಗಾಯಿಸುತ್ತದೆ ಮತ್ತು ಆ ಬ್ಯಾಂಕಿನ ಜಾಲತಾಣವನ್ನು ತೆರೆಯುತ್ತದೆ.
8. ಬ್ಯಾಂಕಿನ ಜಾಲತಾಣದ ಸಂಪರ್ಕ ಪುಟವು ತೆರೆದುಕೊಳ್ಳುತ್ತದೆ. ಮಾಲೀಕನು ತನ್ನ ವಿವರಗಳನ್ನು ಮತ್ತು ಅಂತಹ ಬ್ಯಾಂಕ್ ಒದಗಿಸಿದ ಬಳಕೆದಾರನ ಹೆಸರು ಮತ್ತು ಸಂಕೇತ ಪದಗಳನ್ನು ಉಪಯೋಗಿಸಿ ಅದನ್ನು ಅಧಿಕೃತಗೊಳಿಸತಕ್ಕದ್ದು.
9. ಈಗ ಬ್ಯಾಂಕಿನ ಜಾಲತಾಣವು "ತೆರಿಗೆ ಪ್ರವರ್ಗ" "ಪರವಾನಿಗೆ (Permit) ಸಂಖ್ಯೆ" "ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ" (CTD Reference Number) ಮತ್ತು "ಮೊಬಲಗು" (Amount)ಗಳನ್ನು ಪ್ರದರ್ಶಿಸುತ್ತದೆ. ಈ ಹಂತದಲ್ಲಿ ಪಾವತಿ ವಿವರಗಳನ್ನು ಮಾರ್ಪಾಡು ಮಾಡಲು ಅವಕಾಶವಿರುವುದಿಲ್ಲ.
10. "Confirm the Payment" ಎನ್ನುವುದರ ಮೇಲೆ ಮಾಲೀಕನು Click ಮಾಡಿದ ನಂತರ Core Banking ವ್ಯವಸ್ಥೆಯಲ್ಲಿ ವಹಿವಾಟು ನಡೆಯುತ್ತದೆ.

11. ಪಾವತಿ ಪ್ರಕ್ರಿಯೆ ಪೂರ್ಣಗೊಂಡ ನಂತರ, ಬ್ಯಾಂಕಿನ ಜಾಲತಾಣದ ಸಂಪರ್ಕ ವಾಣಿಜ್ಯ ತೆರಿಗೆ ಇಲಾಖೆಯ ಜಾಲತಾಣಕ್ಕೆ ವರ್ಗಾಯಿಸಲ್ಪಡುತ್ತದೆ. ಬ್ಯಾಂಕಿನ ಉಲ್ಲೇಖ ಸಂಖ್ಯೆಯನ್ನು ಒಳಗೊಂಡಂತೆ ಯಶಸ್ವಿ ಪಾವತಿಯ ವಿವರಗಳನ್ನು ಜಾಲತಾಣ https://Vat.kar.nic.in/epay ಪ್ರದರ್ಶಿಸುತ್ತದೆ.

12. "ಪ್ರಿಂಟ್ ಚಲನ್" (Print Challan) ಎಂಬುವುದರ ಮೇಲೆ Click ಮಾಡಿ ಮುದ್ರಿತ ಚಲನ್‌ನ್ನು ಪಡೆಯಬಹುದಾಗಿದೆ.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ https://Vat.kar.nic.in/epay ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

PR-2269 **ಅಜಯ್ ಸೇಠ್**
SC-100 ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, 1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು**

**ಅಧಿಸೂಚನೆ–II**

**ಸಂಖ್ಯೆ : ಸಿಸಿಡಬ್ಲ್ಯೂ/ಸಿಆರ್–23/2013–14, ಬೆಂಗಳೂರು, ದಿನಾಂಕ : 31–07–2013.**

1979ರ ಕರ್ನಾಟಕ ವಿಲಾಸಿ ತೆರಿಗೆ ಅಧಿನಿಯಮದ ಪ್ರಕರಣ 5(A)ರ ಉಪಪ್ರಕರಣ (1)ರ ಪರಂತುಕದ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಅಧಿಸೂಚಿಸುವುದೇನೆಂದರೆ ಸದರಿ ಅಧಿನಿಯಮದ ಪ್ರಕರಣ 5ರ ಉಪಪ್ರಕರಣ (1)ರ ಅಡಿಯಲ್ಲಿ ನಿಗದಿತ ನಮೂನೆಯಲ್ಲಿ ಹೇಳಿಕೆ (Statement) ಯನ್ನು ಸಲ್ಲಿಸಲು ಬಾಧ್ಯತೆ ಇರುವ ಪ್ರತಿಯೊಬ್ಬ ಮಾಲೀಕನು ಜುಲೈ 2013 ರಿಂದ ಯಾವುದೇ ಹೇಳಿಕೆಯನ್ನು ಇಂಟರ್‌ನೆಟ್ ಮುಖಾಂತರ ವಿದ್ಯುನ್ಮಾನ ವಿಧಾನದಲ್ಲಿ ಸಲ್ಲಿಸತಕ್ಕದ್ದು :–

1. ಈ ಹಿಂದೆ ಬಳಕೆದಾರನ ಹೆಸರು ಮತ್ತು ಸಂಕೇತಪದಗಳನ್ನು ಪಡೆಯದೇ ಇರುವ ಮಾಲೀಕನು ಸಂಬಂಧಪಟ್ಟ ವಿಲಾಸಿ ತೆರಿಗೆ ಅಧಿಕಾರಿಯ ಕಛೇರಿಯಿಂದ ಪಡೆದುಕೊಳ್ಳತಕ್ಕದ್ದು.

2. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ಮಾಲೀಕನು ಜಾಲತಾಣ http://164.100.80.99/lt/ ಅನ್ನು ತೆರೆದು ತಮಗೆ ನೀಡಿರುವ ಬಳಕೆದಾರನ ಹೆಸರು ಮತ್ತು ಸಂಕೇತಪದಗಳನ್ನು ಉಪಯೋಗಿಸಿ ಅವನಿಗೆ/ಅವಳಿಗೆ ಅನ್ವಯವಾಗುವ ನಮೂನೆ II-AP ಅಥವಾ ನಮೂನೆ II-AC ರಲ್ಲಿ, ಹೇಳಿಕೆ ಪಟ್ಟಿಯನ್ನು ಜಾಲತಾಣದಲ್ಲಿ ಪ್ರಕಟಿಸಿದ ಸೂಚನೆ ಹಾಗೂ ನಿಯಮಗಳ ಪ್ರಕಾರ ವಿದ್ಯುನ್ಮಾನ ವಿಧಾನದಲ್ಲಿ ಸಲ್ಲಿಸತಕ್ಕದ್ದು.

PR-2270 **ಅಜಯ್ ಸೇಠ್**
SC-100 ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**OFFICE OF THE COMMISSIONER OF COMMERCIAL TAXES,**
**1st Main Road, Gandhinagar, Bangalore**

**NOTIFICATION**

No. EGI.CR-4/2012-13, Bangalore, Dated : 31-07-2013.

In exercise of the powers under the second proviso to sub-section (1) of Section 35 of the Karnataka Value Added Tax Act, 2003 (Karnataka Act 32 of 2004) read with the first proviso to clause (a) of sub-rule (1) of Rule 50 of the Karnataka Value Added Tax Rules, 2005 and in superession of the notification No. EGI.CR-4/2012-13, dated 27-04-2012 it is hereby notified with effect from the 1st day of Septermber, 2013 that every dealer registered under the said Act paying an amount of ten thousand rupees or more as tax or any other amount due under the said Act or Rules shall pay such amount by electronic remittance through internet in the following manner :-

i. A dealer required to make payment by electronic remittance shall open the website https://vat.kar.nic.in/epay or may click on the link "e-Payment (All ACTs)" provided in website http:/ctax.kar.nic.in. The website is an open website, no user authentication is required.

ii. Select tax category as KVAT (Karnataka Value Added Tax) from the list of nine categories of tax as displayed on the home page.

iii. Enter the TIN, The TIN is validated by the system and details such as Trade Name, address and office of the dealer where he/she is registered are authomatically displayed.

iv. Enter other details like Tax Period. Tax or any other Amount, Interest, Penalty, etc. In the respective boxes provided therein.

v. Select one of the banks enabled for e-Payment in which the dealer has an account with net banking facility from a drop down list and click on "NEXT".

vi. Verify the entered details displayed by the system and after confirming the details entered. Click submit button. The system saves these details and a unique number called the CTD Reference Number is gerenated and displayed. This number shall be noted down for future use.

vii. The system then passes the payment information entered, to the selected bank's web-site and opens the bank website.

viii. The login page of the bank website will be opened and it shall be authenticated by the dealer, entering his credentials, username and password, as provided by the bank.

ix. The bank site now displays the Tax Category, TIN, CTD Reference Number and Amount. There is no provision to alter the payment details at this stage.

x. After the dealer clicks on "confirm the payment". The transaction will be carried out in Core Banking System.

xi. After completion of payment process, the bank's web-site link will be transferred to the CTD website. The website, https:vat.kar.nic.in/epay will show the details of successful payment including Bank Reference Number.

xii. A print out of the challan can be obtained by clicking on "Print Challan".

For further clarification user manual hosted on the website https:/vat.kar.nic.in/epay may be referred.

**AJAY SETH**

Commissioner of Commercial Taxes

Karnataka, Bangalore.

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, 1ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಇ.ಜಿ–1/ಸಿಆರ್–04/2012–13, ಬೆಂಗಳೂರು, ದಿನಾಂಕ : 31–07–2013.**

2003ರ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಅಧಿನಿಯಮದ ಪ್ರಕರಣ 35ರ ಉಪ ಪ್ರಕರಣ (1)ರ ಎರಡನೆಯ ಪರಂತುಕದೊಂದಿಗೆ 2005ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ನಿಯಮದಡಿಯ ನಿಯಮ 50ರ ಉಪನಿಯಮ (1)ರ ಕಂಡಿಕೆ(ಎ)ನ ಮೊದಲನೆಯ ಪರಂತುಕಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿಸೂಚನೆ ಸಂಖ್ಯೆ : ಇ.ಜಿ–1/ಸಿಆರ್–04/2012–13, ದಿನಾಂಕ : 27–04–2012 ಅನ್ನು ರದ್ದುಪಡಿಸುತ್ತಾ ಈ ಮೂಲಕ ಅಧಿಸೂಚಿಸುವುದೇನೆಂದರೆ, 2013ರ ಸೆಪ್ಟಂಬರ್ ಮೊದಲನೆಯ ದಿನದಿಂದ ಅನ್ವಯವಾಗುವಂತೆ ಸದರಿ ಅಧಿನಿಯಮ ಅಥವಾ ನಿಯಮಗಳಡಿಯಲ್ಲಿ ಹತ್ತು ಸಾವಿರ ರೂಪಾಯಿಗಳಿಕ್ಕಿಂತ ಹೆಚ್ಚಿನ ಮೊತ್ತದ ತೆರಿಗೆ ಅಥವಾ ಯಾವುದೇ ಮೊಬಲಗು ಸಂದಾಯ ಮಾಡುವ ಸದರಿ ಅಧಿನಿಯಮದಡಿಯಲ್ಲಿ ನೋಂದಾಯಿತನಾದ ಪ್ರತಿಯೊಬ್ಬ ವ್ಯಾಪಾರಿಯು ಅಂತಹ ಮೊಬಲಗನ್ನು ಇಂಟರ್‌ನೆಟ್ ಮೂಲಕ ವಿದ್ಯುನ್ಮಾನ ಪಾವತಿ ರೂಪದಲ್ಲಿ ಈ ಕೆಳಕಂಡ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

i. ವಿದ್ಯುನ್ಮಾನ ಪಾವತಿ ಮಾಡಲು ಬಾಧ್ಯನಾದ ವ್ಯಾಪಾರಿಯ ಜಾಲತಾಣ (web-site) https://vat.kar.nic.in/epay ಅನ್ನು ತೆರೆಯಬೇಕು ಅಥವಾ ಜಾಲತಾಣ https://ctax.kar.nic.in ನಲ್ಲಿ ಇರುವ 'e-Payment (All Acts)' ಎನ್ನುವ ಸಂಪರ್ಕದ ಮೇಲೆ Click ಮಾಡಬೇಕು ಸದರಿ ಜಾಲತಾಣ ಮುಕ್ತ ಜಾಲತಾಣವಾಗಿದ್ದು. ಬಳಕೆದಾರನ ಅಧಿಕೃತತೆಯ ಅವಶ್ಯವಿರುವುದಿಲ್ಲ.

ii. ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ಒಂಬತ್ತು ತೆರಿಗೆಗಳ ಪಟ್ಟಿಯಲ್ಲಿ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಅಧಿನಿಯಮವನ್ನು ತೆರಿಗೆ ಪ್ರವರ್ಗವೆಂದಾಗಿ ಆಯ್ಕೆ ಮಾಡಿ ಅದರ ಮೇಲೆ Click ಮಾಡಿ.

iii. ನಿಮ್ಮ TIN ನಮೂದಿಸಿರಿ. ಸಂಬಂಧಿತ ತಂತ್ರಾಂಶ ಸದರಿ TIN ನ ಸಿಂಧುತ್ವವನ್ನು ಖಚಿತಪಡಿಸಿಕೊಳ್ಳುತ್ತದೆ ಮತ್ತು ವ್ಯಾಪಾರಿಯ ವ್ಯವಹಾರದ ಹೆಸರು, ವಿಳಾಸ ಮತ್ತು ಅವನು/ಅವಳು ನೋಂದಾಯಿತರಾದ ಕಛೇರಿನಂತಹ ವಿವರಗಳು ತಂತಾನೇ ಪ್ರದರ್ಶಿತವಾಗುತ್ತವೆ

iv. ತೆರಿಗೆ ಅವಧಿ, ತೆರಿಗೆ ಅಥವಾ ಇತರೆ ಮೊತ್ತ, ಬಡ್ಡಿ, ದಂಡ ಮುಂತಾದ ವಿವರಗಳನ್ನು ನಿಗದಿ ಮಾಡಿರುವ ಸಂಬಂಧಿತ ಆವರಣಗಳಲ್ಲಿ ನಮೂದಿಸಿ.

v. ವ್ಯಾಪಾರಿಯು ನೆಟ್ ಬ್ಯಾಂಕಿಂಗ್ ಸೌಲಭ್ಯವಿರುವ ಖಾತೆ ಹೊಂದಿದ ಮತ್ತು ಇ–ಪಾವತಿಗೆ ಸಮರ್ಥಗೊಳಿಸಿದ ಬ್ಯಾಂಕ್‌ಗಳಲ್ಲಿ ಒಂದನ್ನು ಜಾರು ಪಟ್ಟಿ (Drop down List) ಯಿಂದ ಆಯ್ಕೆ ಮಾಡಿ ಮತ್ತು 'NEXT' ಎನ್ನುವುದರ ಮೇಲೆ Click ಮಾಡಿ.

vi. ಗಣಕಯಂತ್ರದ ಮುಖ್ಯ ಪರದೆಯ ಮೇಲೆ ಪ್ರದರ್ಶಿತವಾಗುವ ವಿವರಗಳನ್ನು ಪರಿಶೀಲಿಸಿ ಮತ್ತು ಅಂತಹ ವಿವರಗಳನ್ನು ದೃಢೀಕರಿಸಿಕೊಂಡ ನಂತರ 'Submit' ಎನ್ನುವುದರ ಮೇಲೆ Click ಮಾಡಿ. ಈ ವಿವರಗಳನ್ನು ಗಣಕಯಂತ್ರ ವ್ಯವಸ್ಥೆ ದಾಖಲಿಸುತ್ತದೆ ಹಾಗೂ ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ (CTD Reference Number) ಎಂದು ಕರೆಯಲಾಗುವ ಒಂದು ವಿಶಿಷ್ಟ ಸಂಖ್ಯೆ ಉತ್ಪಾದನೆ ಆಗಿ ಪ್ರದರ್ಶಿತವಾಗುತ್ತದೆ. ಈ ವಿಶಿಷ್ಟ ಸಂಖ್ಯೆಯನ್ನು ಭವಿಷ್ಯದ ಬಳಕೆಗಾಗಿ ಬರೆದಿಟ್ಟುಕೊಳ್ಳತಕ್ಕದ್ದು.

vii. ನಂತರ ಗಣಕಯಂತ್ರ ವ್ಯವಸ್ಥೆಯು ನಮೂದಿತ ಪಾವತಿ ಮೊತ್ತದ ವಿವರಗಳನ್ನು ಆಯ್ಕೆ ಮಾಡಿದ ಬ್ಯಾಂಕಿನ ಜಾಲತಾಣಕ್ಕೆ ವರ್ಗಾಯಿಸುತ್ತದೆ ಮತ್ತು ಆ ಬ್ಯಾಂಕ್‌ನ ಜಾಲತಾಣವನ್ನು ತೆರೆಯುತ್ತದೆ.

viii. ಬ್ಯಾಂಕಿನ ಜಾಲತಾಣದ ಸಂಪರ್ಕ ಪುಟವು ತೆರೆದುಕೊಳ್ಳುತ್ತದೆ. ವ್ಯಾಪಾರಿಯು ತನ್ನ ವಿವರಗಳನ್ನು ಮತ್ತು ಅಂತಹ ಬ್ಯಾಂಕ್ ಒದಗಿಸಿದ 'ಬಳಕೆದಾರನ ಹೆಸರು' ಮತ್ತು 'ಸಂಕೇತ ಪದ'ಗಳನ್ನು ಉಪಯೋಗಿಸಿ ಅದನ್ನು ಅಧಿಕೃತಗೊಳಿಸತಕ್ಕದ್ದು.

ix. ಈಗ ಬ್ಯಾಂಕಿನ ಜಾಲತಾಣವು "ತೆರಿಗೆ ಪ್ರವರ್ಗ" "ಟಿನ್ (TIN) "ವಾಣಿಜ್ಯ ತೆರಿಗೆ ಇಲಾಖೆಯ ಉಲ್ಲೇಖ ಸಂಖ್ಯೆ" (CTD Reference Number) ಮತ್ತು "ಮೊಬಲಗು" (Amount)ಗಳನ್ನು ಪ್ರದರ್ಶಿಸುತ್ತದೆ. ಈ ಹಂತದಲ್ಲಿ ಪಾವತಿ ವಿವರಗಳನ್ನು ಮಾರ್ಪಾಡು ಮಾಡಲು ಅವಕಾಶವಿರುವುದಿಲ್ಲ.

x. "Confirm the Payment" ಎನ್ನುವುದರ ಮೇಲೆ ವ್ಯಾಪಾರಿ Click ಮಾಡಿದ ನಂತರ ಕೋರ್ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ವಹಿವಾಟು ಕೈಗೊಳ್ಳಲಾಗುತ್ತದೆ.

xi. ಪಾವತಿ ಪ್ರಕ್ರಿಯೆ ಪೂರ್ಣಗೊಂಡ ನಂತರ, ಬ್ಯಾಂಕಿನ ಜಾಲತಾಣದ ಸಂಪರ್ಕ ವಾಣಿಜ್ಯ ತೆರಿಗೆ ಇಲಾಖೆಯ ಜಾಲತಾಣಕ್ಕೆ ವರ್ಗಾಯಿಸಲ್ಪಡುತ್ತದೆ. ಬ್ಯಾಂಕ್ ಉಲ್ಲೇಖ ಸಂಖ್ಯೆಯನ್ನು ಒಳಗೊಂಡಂತೆ ಯಶಸ್ವಿ ಪಾವತಿಯ ವಿವರಗಳನ್ನು ಜಾಲತಾಣ https://vat.kar.nic.in/epay ಪ್ರದರ್ಶಿಸುತ್ತದೆ.

xii. "ಪ್ರಿಂಟ್ ಚಲನ್" (Print Challan) ಎಂಬುವುದರ ಮೇಲೆ Click ಮಾಡಿ ಮುದ್ರಿತ ಚಲನ್‌ನ್ನು ಪಡೆಯಬಹುದಾಗಿದೆ.

ಹೆಚ್ಚಿನ ಮಾಹಿತಿಗಾಗಿ ಜಾಲತಾಣ https://vat.kar.nic.in/epay ನಲ್ಲಿ ಅಳವಡಿಸಿದ ಬಳಕೆದಾರರ ಕೈಪಿಡಿಯನ್ನು ನೋಡಬಹುದು.

**ಅಜಯ್ ಸೇಠ್**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

PR-2274
SC-100

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**ಮಾನ್ಯ ಆಯುಕ್ತರವರ ಕಛೇರಿ, ನರಸಿಂಹರಾಜ ಚೌಕ, ಬೆಂಗಳೂರು–02**

**ಸಂಖ್ಯೆ:ಸ.ಆ(ಜಾ)/ಪಿಆರ್/1338/13–14, ದಿನಾಂಕ:03.09.2013**

**ಸಾರ್ವಜನಿಕ ಪ್ರಕಟಣೆ**

**ವಿಷಯ: ಹಾಲಿ ಇರುವ ಜಾಹೀರಾತು ಬೈಲಾ–2006ಕ್ಕೆ ಪ್ರಸ್ತಾಪಿಸಿರುವ ತಿದ್ದುಪಡಿಗಳು (ಈ ತಿದ್ದುಪಡಿಗಳನ್ನು ತಿದ್ದುಪಡಿ 2012 ಎಂದು ಹೆಸರಿಸುವುದು)**

**ಉಲ್ಲೇಖ:** 1) ಪಾಲಿಕೆಯ ಕೌನ್ಸಿಲ್ ಸಭೆಯ ವಿಷಯದ ಸಂಖ್ಯೆ: 5(340)/2011–12, ದಿನಾಂಕ:03.03.2012.

2) ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ:ನಅಇ/362/ಎಂಎನ್‌ಯು/2010, ದಿನಾಂಕ:09.07.2013.

**ವಲಯಗಳ ಪಟ್ಟಿ**

**ವಲಯ:ಎ**

**ಜಾಹೀರಾತು ನಿಷಿದ್ದ ಪ್ರದೇಶ: (ಸರ್ಕಾರದ ಕಾರ್ಯಕ್ರಮಗಳ ಜಾಹೀರಾತು ಹೊರತುಪಡಿಸಿ)**

1. ಚಾಲುಕ್ಯ ವೃತ್ತದಿಂದ ಬಸವೇಶ್ವರ ವೃತ್ತ, ಹಳೇ ಹೈಗ್ರೌಂಡ್ಸ್ ಪೊಲೀಸ್ ವೃತ್ತ ಬಾಲಬ್ರೂಹಿ ಅಥಿತಿ ಗೃಹ ಮತ್ತು ಗಾಲ್ಫ್ ಕ್ಲಬ್ ಮೂಲಕ ಸಂಚರಿಸುವ ರಸ್ತೆ ವಿಂಡ್ಸರ್ ಮ್ಯಾನರ್ ಜಂಕ್ಷನ್‌ವರೆಗೆ

**ಭಾಗ–I**

**ಸಾಮಾನ್ಯ**

**1) <u>2.ಎ(21) ಕ್ಕೆ ಬಿಡತಕ್ಕದ್ದು:</u>**

**ಗ್ಯಾಂಟ್ರಿ ಜಾಹೀರಾತು:** ಅಂದರೆ ಲೋಹದಿಂದ ತಯಾರಿಸಿದ ಮತ್ತು ಮೇಲ್ಭಾಗವನ್ನು ತೊಲೆಯಿಂದ ಜೋಡಿಸಲ್ಪಟ್ಟ ರಸ್ತೆಯ ಎರಡೂ ಬದಿಗಳಲ್ಲಿರುವ ಕಂಬಗಳ ಮೇಲೆ ಅಳವಡಿಸಿರುವ ಗ್ಯಾಂಟ್ರಿಗಳ ಮೇಲೆ ಸಂಚಾರ ವಿರುದ್ಧ ದಿಕ್ಕಿನಲ್ಲಿರುವ ರಸ್ತೆಯ ಮೇಲೆ ಪ್ರದರ್ಶಿಸುವ ಜಾಹೀರಾತುಗಳು.

**(ವಾಹನ ಚಾಲಕರನ್ನು ದಿಕ್ಕುತಪ್ಪಿಸುವ ಹಾಗೂ ಅಪಘಾತಗಳು ಸಂಭವಿಸುವ ಕಾರಣ)**

**2) <u>3ಎ(7) ತಿದ್ದುಪಡಿ:</u>**

ಯಾವುದೇ ಅನಧಿಕೃತ ಜಾಹೀರಾತಿಗೆ ನಿರ್ದಿಷ್ಟ ಪಡಿಸಿದ ಪ್ರಮಾಣದಲ್ಲಿ ದಂಡ ವಿಧಿಸಲು ಕಾರಣವಾಗುತ್ತದೆ. ಎಲ್ಲಾ ವಿಧದ ಜಾಹೀರಾತುಗಳಿಗೆ ಸಂಬಂಧಪಟ್ಟಂತೆ, ಯಾವುದೇ ರೀತಿಯ ಉಲ್ಲಂಘನೆ ಕಂಡು ಬಂದಲ್ಲಿ ಆಯುಕ್ತರು ಅನ್ವಯವಾಗುವ ವಾರ್ಷಿಕ ಜಾಹೀರಾತು ಶುಲ್ಕಕ್ಕೆ ಮೀರದಂತೆ ಗರಿಷ್ಠ ದಂಡವನ್ನು ವಿಧಿಸಬಹುದು, ಹಾಗೂ ಯಾವುದೇ ನೋಟೀಸ್ ನೀಡದೆ ಜಾಹೀರಾತು ಫಲಕವನ್ನು ತೆರವುಗೊಳಿಸತಕ್ಕದ್ದು ಹಾಗೂ ಸಂಸ್ಥೆಯ ನೊಂದಾವಣೆಯನ್ನು ರದ್ದುಗೊಳಿಸಲು ಕ್ರಮವಹಿಸುವುದು.

**3) ಭಾಗ–II ಸೇರ್ಪಡೆ: 3ಎ(30):**

೧) ನೆಲದ ಮೇಲೆ ಅಥವಾ ಕಟ್ಟಡಗಳ ಮೇಲೆ "ಎರಡು ಫಲಕಗಳ ನಡುವಿನ ಅಂತರ ಕನಿಷ್ಠ 10 ಮೀಟರ್ ಅಂತರವಿರತಕ್ಕದ್ದು." ಎಂದು ಸೇರಿಸತಕ್ಕದ್ದು.

**4) 3ಎ(22) ತಿದ್ದುಪಡಿ:**

ಏಜೆನ್ಸಿಗಳು ಎಲ್ಲಾ ಜಾಹೀರಾತುಗಳ ವಾರ್ಷಿಕ ತೆರಿಗೆಯನ್ನು ಒಂದೇ ಕಂತಿನಲ್ಲಿ ಪ್ರತಿ ವರ್ಷ ಜುಲೈ 30ನೇ ದಿನಾಂಕದೊಳಗಾಗಿ ಪಾವತಿಸತಕ್ಕದ್ದು.

ಜಾಹೀರಾತು ಬೈಲಾ–2006ಕ್ಕೆ ಸೂಕ್ತವಾಗಿ ಮೇಲ್ಕಂಡಂತೆ ಬೈಲಾದಲ್ಲಿ ಕೆಲವು ಉಪವಿಧಿಗಳ ಸೇರ್ಪಡೆ, ಕೆಲವು ಉಪವಿಧಿಗಳ ತಿದ್ದುಪಡಿ, ಕೆಲವು ಉಪವಿಧಿಗಳನ್ನು ಕೈಬಿಡಲಾಗಿದ್ದು, ಸೂಕ್ತ ತೀರ್ಮಾನಕ್ಕಾಗಿ ತೆರಿಗೆ ಮತ್ತು ಆರ್ಥಿಕ ಸ್ಥಾಯಿ ಸಮಿತಿ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸಭೆಯ ಮುಂದೆ ಮಂಡಿಸಿರುವ ಆಯುಕ್ತರವರ ದಿನಾಂಕ: 21.02.2012ರ ಟಿಪ್ಪಣಿ ಹಾಗೂ ಸದರಿ ಟಿಪ್ಪಣಿಯಲ್ಲಿನ ಪ್ರಸ್ತಾವನೆಯನ್ನು ಈ ಕೆಳಕಂಡ ಮಾರ್ಪಾಡುಗಳೊಂದಿಗೆ ಒಪ್ಪಿರುವ ತೆರಿಗೆ ಮತ್ತು ಆರ್ಥಿಕ ಸ್ಥಾಯಿ ಸಮಿತಿಯ 27.02.2012ರ ನಿರ್ಣಯ.

ಹಾಲಿ ಇರುವ ಜಾಹೀರಾತು ಬೈಲಾ 2006ಕ್ಕೆ ಪ್ರಸ್ತಾಪಿಸಿರುವ ತಿದ್ದುಪಡಿಗಳು (ಈ ತಿದ್ದುಪಡಿಗಳನ್ನು ತಿದ್ದುಪಡಿ 2012 ಎಂದು ಹೆಸರಿಸುವುದು):

ಪ್ರಸ್ತಾವನೆಯ ಕ್ರಮಸಂಖ್ಯೆ 2 ರಲ್ಲಿರುವ ಜಾಹೀರಾತು ತೆರಿಗೆ ದರಗಳನ್ನು, ಅಂದರೆ ಹಾಲಿ ಇರುವ ದರಗಳಿಗಿಂತ ಸುಮಾರು ಒಂದುಪಟ್ಟು (1+1) ಜಾಹೀರಾತು ತೆರಿಗೆಯನ್ನು, ಈ ಕೆಲಕಂಡ ರಸ್ತೆಗಳಿಗೆ ಮಾತ್ರ ಅನ್ವಯಿಸುವಂತೆ ಹಾಗೂ ಈ ಕೆಳಕಂಡ ಪಟ್ಟಿಯಲ್ಲಿರುವಂತೆ ಜಾಹೀರಾತು ತೆರಿಗೆಯನ್ನು ಹೆಚ್ಚಿಸುವುದು.

(ದರಗಳನ್ನು ಹೆಚ್ಚಿಸುವ ಸಂದರ್ಭದಲ್ಲಿ ಗುಣಾಂಕಗಳನ್ನು ದಶಾಂಕಕ್ಕೆ ROUND OFF ಮಾಡುವುದು)

**ಪೂರ್ವವಲಯಕ್ಕೆ ಸಂಬಂಧಪಟ್ಟಂತೆ,**

01. ಎಂ.ಜಿ.ರಸ್ತೆ:– ಟ್ರಿನಿಟಿ ವೃತ್ತದಿಂದ ಕುಂಬ್ಳೆ ವೃತ್ತದ ವರೆವಿಗೆ,
02. ರೆಸಿಡೆನ್ಸಿ ರಸ್ತೆ:– ರಿಚ್‌ಮಂಡ್ ವೃತ್ತದಿಂದ ಮೆಯೋಹಾಲ್ ವರೆವಿಗೆ,
03. ಬ್ರಿಗೇಡ್ ರಸ್ತೆ:– ಎಂ.ಜಿ.ರಸ್ತೆಯಿಂದ ವೆಲ್ಲಾರ ಜಂಕ್ಷನ್ ವರೆವಿಗೆ,
04. ಕಮರ್ಷಿಯಲ್ ಸ್ಟ್ರೀಟ್:– ಕಾಮರಾಜ ರಸ್ತೆಯಿಂದ ಓ.ಪಿ.ಎಚ್.ರಸ್ತೆಯವರೆವಿಗೆ,
05. ಕಾಮರಾಜರಸ್ತೆ:– ಕಾಮರಾಜ ಜಂಕ್ಷನ್‌ನಿಂದ ಸೆಂಟ್ ಜಾನ್ ಚರ್ಚ್ ಜಂಕ್ಷನ್‌ವರೆವಿಗೆ,
06. ರಿಚ್‌ಮಂಡ್ ರಸ್ತೆ:– ಡಿಸೋಜ ಸರ್ಕಲ್‌ನಿಂದ ರಿಚ್‌ಮಂಡ್ ಸರ್ಕಲ್‌ವರೆವಿಗೆ,
07. ಇನ್‌ಫೆಂಟ್ರಿ ರಸ್ತೆ:– ವಿಶ್ವೇಶ್ವರಯ್ಯ ಕಟ್ಟಡದಿಂದ ಸಫೀನಾ ಪ್ಲಾಜಾದವರೆವಿಗೆ,
08. ಕನ್ನಿಂಗ್‌ಹ್ಯಾಂ ರಸ್ತೆ:– ಕ್ವೀನ್ಸ್ ವೃತ್ತದಿಂದ ಚಂದ್ರಿಕಾ ಹೋಟೆಲ್‌ವರೆವಿಗೆ,
09. ನ್ಯೂ ಇಂಟರ್‌ನ್ಯಾಷನಲ್ ಏರ್‌ಪೋರ್ಟ್ ರಸ್ತೆ:– ವಿಂಡ್ಸರ್ ಮ್ಯಾನರ್ ಜಂಕ್ಷನ್‌ನಿಂದ ಹೆಬ್ಬಾಳ ಪ್ಲೈ ಓವರ್ ವರೆವಿಗೆ,
10. ವಿಠಲ್ ಮಲ್ಯ ರಸ್ತೆ:– ಸೆಂಟ್ ಮಾರ್ಕ್ ರಸ್ತೆಯಿಂದ ರಾಜರಾಂ ಮೋಹನ್‌ರಾಯ್ ರಸ್ತೆ ವರೆವಿಗೆ
11. ಕ್ವೀನ್ಸ್ ರಸ್ತೆ:– ಪಶು ವೈದ್ಯ ಆಸ್ಪತ್ರೆಯಿಂದ ಇಂಡಿಯನ್ ಎಕ್ಸ್‌ಪ್ರೆಸ್ ರಸ್ತೆಯವರೆವಿಗೆ,
12. ಜಯಮಹಲ್ ಮುಖ್ಯರಸ್ತೆ :– ಮೇಕ್ರಿ ಸರ್ಕಲ್ ನಿಂದ ಕ್ವೀನ್ಸ್ ರಸ್ತೆವರೆವಿಗೆ,
13. ಕಸ್ತೂರಬಾ ರಸ್ತೆ:– ಗಾಂಧಿ ಪ್ರತಿಮೆಯಿಂದ ಯು.ಬಿ.ಸಿಟಿ ಜಂಕ್ಷನ್‌ವರೆವಿಗೆ,
14. ಕಮರ್ಷಿಯೇಟ್ ರಸ್ತೆ:– ಮೆಯೋಹಾಲ್‌ನಿಂದ ಡಿಸೋಜ ಸರ್ಕಲ್‌ವರೆವಿಗೆ,
15. ಪ್ಯಾಲೇಸ್ ರಸ್ತೆ:– ಸಿಂಧೂ ಹೋಟೆಲ್ ನಿಂದ ಮೌಂಟ್ ಕಾರ್ಮಲ್ ರೈಲ್ವೇ ಬ್ರಿಡ್ಜ್‌ವರೆವಿಗೆ,
16. ವಿಕ್ಟೋರಿಯಾ ರಸ್ತೆ:– ಇಂಡಿಯಾ ಗ್ಯಾರೇಜ್ ನಿಂದ ಡಿಸೋಜ್ ಸರ್ಕಲ್‌ವರೆವಿಗೆ,
17. ಹಳೇ ವಿಮಾನ ನಿಲ್ದಾಣ ರಸ್ತೆ: ದೊಮ್ಮಲೂರು ಪ್ಲೈ ಓವರ್‌ನಿಂದ ಹಳೇ ವಿಮಾನ ನಿಲ್ದಾಣ ಗೇಟ್‌ವರೆವಿಗೆ,
18. ಸೆಂಟ್‌ಮಾರ್ಕ್ಸ್ ರಸ್ತೆ:– ಎಂ.ಜಿ.ರಸ್ತೆ. ಕುಂಬ್ಳೆ ವೃತ್ತದಿಂದ ರೆಸಿಡೆನ್ಸಿ ರಸ್ತೆವರೆವಿಗೆ,
19. ಹೊಸೂರು ರಸ್ತೆ:– ವೆಲ್ಲಾರ ಜಂಕ್ಷನ್‌ನಿಂದ ಕ್ರೈಸ್ತ ಸಮೂದಾಯದ ಸ್ಮಶಾನದ ಪಕ್ಕದ ಬೃಹತ್ ಕಾಲುವೆವರೆವಿಗೆ

**ಪಶ್ಚಿಮ ವಲಯಕ್ಕೆ ಸಂಬಂಧಪಟ್ಟಂತೆ,**

01. ಸಂಪಿಗೆ ರಸ್ತೆ:– ಮಂತ್ರಿ ಮಾಲ್ ನಿಂದ ಮಲ್ಲೇಶ್ವರಂ ಸರ್ಕಲ್‌ವರೆವಿಗೆ,
02. ಕುಮಾರ ಕೃಪರಸ್ತೆ:– ಶಿವಾನಂದ ಸರ್ಕಲ್‌ನಿಂದ ರಾಜೀವ್‌ಗಾಂಧಿ ಪ್ರತಿಮೆವರೆಗೆ,
03. ಟಿ.ಚಾಡಯ್ಯ ರಸ್ತೆ:– ಕಾವೇರಿ ಜಂಕ್ಷನ್‌ನಿಂದ ಮಲ್ಲೇಶ್ವರಂ 18ನೇ ಮುಖ್ಯರಸ್ತೆವರೆವಿಗೆ,

**ದಕ್ಷಿಣ ವಲಯಕ್ಕೆ ಸಂಬಂಧಪಟ್ಟಂತೆ,**

01. ಸಂಪಿಗೆ ರಸ್ತೆ:– ಕ್ರೈಸ್ತ ಸಮೂದಾಯದ ಸ್ಮಶಾನದ ಪಕ್ಕದ ಬೃಹತ್ ಕಾಲುವೆಯಿಂದ ಸೆಂಟ್ರಲ್ ಸಿಲ್ಕ್‌ಬೋರ್ಡ್ ಜಂಕ್ಷನ್‌ವರೆವಿಗೆ,
02. ಬಿ.ಟಿ.ಎಂ.ಮುಖ್ಯರಸ್ತೆ:– ರಾಘವೇಂದ್ರ ಮಠದಿಂದ ಸೆಂಟ್ರಲ್ ಸಿಲ್ಕ್‌ಬೋರ್ಡ್ ಜಂಕ್ಷನ್‌ವರೆವಿಗೆ,
03. ಕೋರಮಂಗಲ ರಿಂಗ್ ರಸ್ತೆ:– ದೊಮ್ಮಲೂರು ಪ್ಲೈ ಓವರ್‌ನಿಂದ ಕೋರಮಂಗಲ ಬಿ.ಡಿ.ಎ ಕಾಂಪ್ಲೆಕ್ಸ್‌ವರೆವಿಗೆ,
04. ಜಯನಗರ:– ಜಯನಗರ ವಾಣಿಜ್ಯ ಸಂಕೀರ್ಣ ಸುತ್ತಲ ರಸ್ತೆ, (ಎಡ ಮತ್ತು ಬಲ)
05. ಆರ್.ವಿ.ರಸ್ತೆ:– ಲಾಲ್‌ಬಾಗ್ ವೆಸ್ಟ್‌ಗೇಟ್‌ನಿಂದ ಬಿ.ಟಿ.ಎಂ.ರಸ್ತೆಗೆ ಸೇರುವ ರಸ್ತೆವರೆವಿಗೆ,

**ಯಲಹಂಕ ವಲಯಕ್ಕೆ ಸಂಬಂಧಪಟ್ಟಂತೆ,**

01. ನ್ಯೂ ಇಂಟರ್‌ನ್ಯಾಷನಲ್ ಏರ್‌ಪೋರ್ಟ್ ರಸ್ತೆ:– ಹೆಬ್ಬಾಳ ಪ್ಲೈ ಓವರ್‌ನಿಂದ ಪಾಲಿಕೆ ವ್ಯಾಪ್ತಿಯವರೆವಿಗೆ,

**ಮಹದೇವಪುರ ವಲಯಕ್ಕೆ ಸಂಬಂಧಪಟ್ಟಂತೆ,**

01. ಮಾರತ್‌ಹಳ್ಳಿ ಮುಖ್ಯರಸ್ತೆ:– ಹಳೇ ವಿಮಾನ ನಿಲ್ದಾಣ ಗೇಟ್‌ನಿಂದ ಮಾರತ್‌ಹಳ್ಳಿ ರಿಂಗ್ ರಸ್ತೆವರೆವಿಗೆ,

ಇವುಗಳ ಜೊತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವಂತಹ ಬಿ.ಎಂ.ಟಿ.ಸಿ. ಬಸ್ ನಿಲ್ದಾಣ, ಮೆಟ್ರೋ ನಿಲ್ದಾಣ, ರೈಲ್ವೇ ನಿಲ್ದಾಣ ಹಾಗೂ ವಿಮಾನ ನಿಲ್ದಾಣಗಳು.

**ತೀರ್ಮಾನಿಸಿರುವ ದರಗಳು ಈ ಕೆಳಕಂಡಂತೆ ಇರುತ್ತದೆ.**

| ಜಾಹೀರಾತಿನ ಮಾದರಿ | | ಹಾಲಿ ದರಗಳು (ಮಾಸಿಕ ಒಂದು ಚ.ಮೀ.ಗೆ) | ಜಾಹೀರಾತಿನ ಮಾದರಿ | ಪ್ರಸ್ತಾಪಿಸಿರುವ ಹೆಚ್ಚುವರಿ ದರಗಳು (ಮಾಸಿಕ ಒಂದು ಚ.ಮೀ.ಗೆ) |
|---|---|---|---|---|
| ಪ್ರಕಾಶವಿರುವ | ಪ್ರಕಾಶವಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.129 | ಪ್ರಕಾಶವಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.260 |
| ಪ್ರಕಾಶವಿಲ್ಲದಿರುವ | ಪ್ರಕಾಶವಿಲ್ಲದಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.86.25 | ಪ್ರಕಾಶವಿಲ್ಲದಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.180 |
| ನಿಯಾನ್ | ನಿಯಾನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.172.50 | ನಿಯಾನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.350 |
| ಟ್ರೈವಿಜನ್ | ಟ್ರೈವಿಜನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.258.75 | ಟ್ರೈವಿಜನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.520 |
| ಎಲೆಕ್ಟ್ರಾನಿಕ್ಸ್ | ಎಲೆಕ್ಟ್ರಾನಿಕ್ಸ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.258.75 | ಎಲೆಕ್ಟ್ರಾನಿಕ್ಸ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.520 |
| ಜೂಜು (ರೇಸ್) ಕುದುರೆ | ಜೂಜು (ರೇಸ್) ಕುದುರೆ (ಪ್ರತಿ ಕುದುರೆ ಮತ್ತು ಪ್ರತಿ ಆಟಕ್ಕೆ) | ರೂ.150 | ಜೂಜು (ರೇಸ್) ಕುದುರೆ (ಪ್ರತಿ ಕುದುರೆ ಮತ್ತು ಪ್ರತಿ ಆಟಕ್ಕೆ) | ರೂ.500 |
| ಬಟ್ಟೆ ಬ್ಯಾನರ್‌ಗಳು | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.30 | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.90 |
| ಫ್ಲೆಕ್ಸ್ ಬ್ಯಾನರ್ | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.86.25 | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.150 |
| ಬಂಟಿಂಗ್ಸ್ | ಬಂಟಿಂಗ್ಸ್ (ಪ್ರತಿ ಕಿಲೋಗ್ರಾಂಗೆ) | ರೂ.15 | ಬಂಟಿಂಗ್ಸ್ (ಪ್ರತಿ ಕಿಲೋಗ್ರಾಂಗೆ) | ರೂ.100 |

ಕ್ರಮ ಸಂಖ್ಯೆ:2 ರಲ್ಲಿ ನಮೂದಿಸಿರುವ ರಸ್ತೆಗಳನ್ನು ಹೊರತುಪಡಿಸಿ ಉಳಿದಂತೆ ಎಲ್ಲಾ 8 ವಲಯಗಳ ವ್ಯಾಪ್ತಿಯಲ್ಲಿ ಬರುವ ಜಾಹೀರಾತುಗಳಿಗೆ ಕ್ರಮಸಂಖ್ಯೆ: 03 ರಲ್ಲಿ ಹಾಲಿ ಇರುವ ದರಗಳಂತೆ ಅಂದರೆ ಸುಮಾರು ಅರ್ಧಪಟ್ಟು ಹೆಚ್ಚುವರಿ (1+0.5) ಜಾಹೀರಾತು ತೆರಿಗೆ ಅನ್ವಯಿಸುವಂತೆ, ಈ ಕೆಳಕಂಡ ಪಟ್ಟಿಯಲ್ಲಿರುವಂತೆ ಜಾಹೀರಾತು ತೆರಿಗೆಯನ್ನು ಹೆಚ್ಚಿಸಲು ತೀರ್ಮಾನಿಸಿದೆ. (ದರಗಳನ್ನು ಹೆಚ್ಚಿಸುವ ಸಂದರ್ಭದಲ್ಲಿ ಗುಣಾಂಕಗಳನ್ನು ದಶಾಂಕಕ್ಕೆ ROUND OFF ಮಾಡುವುದು).

**ತೀರ್ಮಾನಿಸಿರುವ ದರಗಳು ಈ ಕೆಳಕಂಡಂತೆ ಇರುತ್ತದೆ.**

| ಜಾಹೀರಾತಿನ ಮಾದರಿ | | ಹಾಲಿ ದರಗಳು (ಮಾಸಿಕ ಒಂದು ಚ.ಮೀ.ಗೆ) | ಜಾಹೀರಾತಿನ ಮಾದರಿ | ಪ್ರಸ್ತಾಪಿಸಿರುವ ಹೆಚ್ಚುವರಿ ದರಗಳು (ಮಾಸಿಕ ಒಂದು ಚ.ಮೀ.ಗೆ) |
|---|---|---|---|---|
| ಪ್ರಕಾಶವಿರುವ | ಪ್ರಕಾಶವಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.129 | ಪ್ರಕಾಶವಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.200 |

| ಜಾಹೀರಾತಿನ ಮಾದರಿ | | ಹಾಲಿ ದರಗಳು (ಮಾಸಿಕ ಒಂದು ಚ.ಮೀ.ಗೆ) | ಜಾಹೀರಾತಿನ ಮಾದರಿ | ಪ್ರಸ್ತಾಪಿಸಿರುವ ಹೆಚ್ಚುವರಿ ದರಗಳು (ಮಾಸಿಕ ಒಂದು ಚ.ಮೀ.ಗೆ) |
|---|---|---|---|---|
| ಪ್ರಕಾಶವಿಲ್ಲದಿರುವ | ಪ್ರಕಾಶವಿಲ್ಲದಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.86.25 | ಪ್ರಕಾಶವಿಲ್ಲದಿರುವ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.130 |
| ನಿಯಾನ್ | ನಿಯಾನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.172.50 | ನಿಯಾನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.260 |
| ಟ್ರೈವಿಜನ್ | ಟ್ರೈವಿಜನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.258.75 | ಟ್ರೈವಿಜನ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.390 |
| ಎಲೆಕ್ಟ್ರಾನಿಕ್ಸ್ | ಎಲೆಕ್ಟ್ರಾನಿಕ್ಸ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.258.75 | ಎಲೆಕ್ಟ್ರಾನಿಕ್ಸ್ (ಶೇಕಡ 15% ರಷ್ಟು ಆರೋಗ್ಯಕರ ಸೇರಿ) | ರೂ.390 |
| ಜೂಜು (ರೇಸ್) ಕುದುರೆ | ಜೂಜು (ರೇಸ್) ಕುದುರೆ (ಪ್ರತಿ ಕುದುರೆ ಮತ್ತು ಪ್ರತಿ ಆಟಕ್ಕೆ) | ರೂ.150 | ಜೂಜು (ರೇಸ್) ಕುದುರೆ (ಪ್ರತಿ ಕುದುರೆ ಮತ್ತು ಪ್ರತಿ ಆಟಕ್ಕೆ) | ರೂ.500 |
| ಬಟ್ಟೆ ಬ್ಯಾನರ್‌ಗಳು | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.30 | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.90 |
| ಫ್ಲೆಕ್ಸ್ ಬ್ಯಾನರ್ | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.86.25 | ಬ್ಯಾನರ್‌ಗಳು (ಪ್ರತಿ ವಾರಕ್ಕೆ ಮತ್ತು ಪ್ರತಿ ಮೀಟರ್‌ಗೆ) | ರೂ.150 |
| ಬಂಟಿಂಗ್ಸ್ | ಬಂಟಿಂಗ್ಸ್ (ಪ್ರತಿ ಕಿಲೋಗ್ರಾಂಗೆ) | ರೂ.15 | ಬಂಟಿಂಗ್ಸ್ (ಪ್ರತಿ ಕಿಲೋಗ್ರಾಂಗೆ) | ರೂ.100 |

## ಭಾಗ VI

**ಸೇರ್ಪಡೆ:–**

**8. ಇತರೆ ಕ್ರಮ ವಿಧಾನಗಳು:**

(1) ದಾಸರಹಳ್ಳಿ ವಲಯದಲ್ಲಿ ಇಲ್ಲಿಯವರೆವಿಗೂ ಯಾವುದೇ ರೀತಿಯ ಜಾಹೀರಾತು ಫಲಕಗಳಿಗೆ ಅನುಮತಿ ನೀಡದೇ ಇರುವುದರಿಂದ ಪಾಲಿಕೆಯ ಆರ್ಥಿಕ ಹಿತದೃಷ್ಟಿಯಿಂದ ಮತ್ತು ಅನಧಿಕೃತ ಜಾಹೀರಾತು ಫಲಕಗಳನ್ನು ತಡೆಗಟ್ಟುವ ದೃಷ್ಟಿಯಿಂದ ಹೊಸದಾಗಿ ಖಾಸಗಿ ಸ್ವತ್ತುಗಳಲ್ಲಿ ಸ್ವ–ಜಾಹೀರಾತು/ವಾಣಿಜ್ಯ ಜಾಹೀರಾತು ಮತ್ತು ಇತರೆ ಸರ್ಕಾರಿ ಇಲಾಖೆಗಳ ಮೇಲೆ ಜಾಹೀರಾತು ಫಲಕಗಳನ್ನು ಅಳವಡಿಸಲು ಅನುಮತಿ ನೀಡಲು ಕ್ರಮ ವಹಿಸುವುದು.

(2) ಭೂ ಸ್ವಾಧೀನ, ಮೆಟ್ರೊ ಕಾಮಗಾರಿ, ರಸ್ತೆ ಅಗಲೀಕರಣ, ಕಟ್ಟಡದ ಮಾಲೀಕರಿಂದ ಆಕ್ಷೇಪಣೆ, ಮುಂತಾದ ಅನಿವಾರ್ಯ ಕಾರಣಗಳಿಂದ ಅಳವಡಿಸಲಾಗಿರುವ ಫಲಕಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಹಿಸಿಕೊಳ್ಳಲು ಅಂದರೆ ಅದೇ ವಲಯಗಳಲ್ಲಿ ಮಾತ್ರ ವರ್ಗಾಹಿಸಿಕೊಳ್ಳಬಹುದಾಗಿದ್ದು, ವರ್ಗಾಹಿಸುವ ಪ್ರತಿ ಫಲಕಕ್ಕೆ ವರ್ಗಾವಣೆ ಶುಲ್ಕ ರೂ.1,00,000/– (ರೂ. ಒಂದು ಲಕ್ಷ ಮಾತ್ರ) ವಿಧಿಸಿ ಅನುಮತಿ ನೀಡತಕ್ಕದ್ದು.

(3) ಪಾಲಿಕೆಯಲ್ಲಿ ನೊಂದಾಯಿಸಿರುವ ಜಾಹೀರಾತು ಫಲಕ ಒಂದು ಜಾಹೀರಾತು ಸಂಸ್ಥೆಯಿಂದ ಮತ್ತೊಂದು ಜಾಹೀರಾತು ಸಂಸ್ಥೆಗೆ ವರ್ಗಾವಣೆ ಹೊಂದಲು ಆಸಕ್ತಿ ವ್ಯಕ್ತಪಡಿಸಿದಲ್ಲಿ ಅಂತಹ ಪ್ರತಿ ಪ್ರಕರಣದಲ್ಲಿ ವರ್ಗಾವಣೆ ಹೊಂದುವ ಪ್ರತಿ ಫಲಕಕ್ಕೆ ವರ್ಗಾವಣೆ ಶುಲ್ಕವೆಂದು ರೂ.1,00,000/– (ಒಂದು ಲಕ್ಷ ರೂಗಳು ಮಾತ್ರ) ವಿಧಿಸಿ ಅನುಮತಿ ನೀಡುವುದು.

(4) ಖಾಸಗಿ ಜಾಹೀರಾತು ಏಜೆನ್ಸಿದಾರರು ಈಗಾಗಲೇ ಸಿಟಿ ಸಿವಿಲ್ ಹಾಗೂ ಘನ ಉಚ್ಚ ನ್ಯಾಯಾಲಯಗಳಲ್ಲಿ ಕೆ.ಎಂ.ಸಿ. ಕಾಯ್ದೆ ಕಲಂ 443 (10) ರ ಅನ್ವಯ (Deemed permission) ಪಡೆಯಲು ದಾವೆ ಹೂಡಿರುವ ಪ್ರಕರಣಗಳಲ್ಲಿ ಪ್ರತಿ ಫಲಕಕ್ಕೆ ದಂಡ ರೂಪವಾಗಿ ರೂ.1,00,000/– (ಒಂದು ಲಕ್ಷ ರೂ ಮಾತ್ರ) ವಿಧಿಸಿ ಹಾಗೂ ಯಾವ ದಿನಾಂಕದಿಂದ ನ್ಯಾಯಾಲಯಗಳಲ್ಲಿ ದಾವೆ ಅಥವಾ ರಿಟ್ ಅರ್ಜಿ ಸಲ್ಲಿಸಿರುತ್ತಾರೆಯೋ ಆ ದಿನಾಂಕದಿಂದ ಆಯಾ ಕಾಲಕ್ಕೆ ಜಾರಿಯಲ್ಲಿರುವ ಜಾಹೀರಾತು ತೆರಿಗೆ ವಿಧಿಸಿ ನಿಯಮಾನುಸಾರ ದಾಖಲೆಗಳನ್ನು ಪಡೆದು ಸಕ್ರಮಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು. (ಈ ಸಕ್ರಮ ಒಂದು ಬಾರಿಗೆ ಮಾತ್ರ ಅನುಮತಿ ನೀಡುವುದು)

ಭಾಗ I

ಸಾಮಾನ್ಯ

**5) ಭಾಗ III 4 ಎ (II) ರಲ್ಲಿ**

ಏಜೆನ್ಸಿಯ ನೊಂದಾವಣಿಗೆ ನಿಗದಿಪಡಿಸಿರುವ ರೂ.5,000/–ಗಳನ್ನು ರೂ.50,000/–ಗಳಿಗೆ ಹೆಚ್ಚಿಸುವುದು.

**6) ಭಾಗ– III 4 ಎ (II) (ಅ) ರಲ್ಲಿ**

ಏಜೆನ್ಸಿಯ ನವೀಕರಣಕ್ಕಾಗಿ ಪ್ರತಿ ಮೂರು ವರ್ಷಗಳಿಗೊಮ್ಮೆ ರೂ.2,000/–ಗಳಿಂದ ರೂ.15,000/– ಗಳಿಗೆ ಹೆಚ್ಚಿಸುವುದು.

ಸದರಿ ಜಾಹೀರಾತು ಬೈಲಾ–2006ಕ್ಕೆ ಉದ್ದೇಶಿಸಲಾಗಿರುವ ತಿದ್ದುಪಡಿಗಳಿಗೆ ಸಂಬಂಧಪಟ್ಟ ಜಾಹೀರಾತು ಸಂಸ್ಥೆಗಳು/ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಈ ಪ್ರಕಟಣೆಯ ದಿನಾಂಕದಿಂದ 30 ದಿವಸಗಳ ಕಾಲಾವಕಾಶ ಕಲ್ಪಿಸಲಾಗಿದೆ.

PD. 126
SC. 500

**ಆಯುಕ್ತರು**
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ

**ಸಂಖ್ಯೆ : ಎ1.71ಎ.ಅಮೊ.61/07–08, ದಿನಾಂಕ : 10ನೇ ಜುಲೈ, 2013.**

**ಉಪಸ್ಥಿತರು :** ಶ್ರೀ ಡಿ.ಎಲ್. ಗಣಪತಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಪಿರ್ಯಾದಿ :** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ, (ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಮಾಲೀಕರು :** ಇಲ್ಲಾ

**ಪ್ರಸ್ತಾವನೆ :–**

ದಿನಾಂಕ : 01–03–2008 ರಂದು ಒಂದು ಮಾರುತಿ ಒಮಿನಿ ವ್ಯಾನ್ ವಾಹನ ನೊಂದಣಿ ಸಂಖ್ಯೆ : ಕೆಎ–16–ಎಂ–144 (ಚಾಸ್ಸಿ ಸಂಖ್ಯೆ : ಎಸ್‌ಟಿ–91ಐಎನ್.887686, ಇಂಜಿನ್ ಸಂಖ್ಯೆ : ಎಫ್.8.ಬಿ.ಐ.ಎನ್.670705) ರಲ್ಲಿ ಒಟ್ಟು ಬೀಟೆ ತುಂಡು 05=0.239 ಎಂ3 ನ್ನು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ–ಗಾಡಿಕೊಪ್ಪದ ಬಿ.ಹೆಚ್.ರಸ್ತೆಯಲ್ಲಿ ಗಾಡಿಕೊಪ್ಪ ಅರಳಿಕಟ್ಟೆ ಹತ್ತಿರ ಅಕ್ರಮವಾಗಿ ಸಾಗಿಸುತ್ತಿದ್ದಾಗ, ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಬೀಟೆ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಮತ್ತು ಬೀಟೆ ತುಂಡುಗಳ ಮೇಲೆ ಅರಣ್ಯ ಮೊಕದ್ದಮೆ ಸಂಖ್ಯೆ : 61/2007–08 ನ್ನು ದಾಖಲು ಮಾಡಿಕೊಂಡು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಒಬ್ಬ ಅಸಾಮಿಯನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಕೊಡಲಾಗಿದೆ. ಎಂಬುದಾಗಿ ತಿಳಿಸುತ್ತಾ, ಈ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಬೀಟೆ ತುಂಡುಗಳನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು : ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದ್ದಲ್ಲಿ ವಾಹನ ಮತ್ತು ಬೀಟೆ ತುಂಡುಗಳನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ನಿಂದ ಎಫ್ ವರೆಗಿನ ವಿದಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದುದಾಗಿ ಪ್ರಕಟಣೆಯನ್ನು ದಿನಾಂಕ : 04–04–2008ರ ನಾವಿಕ ಮತ್ತು ತುಂಗಾತರಂಗ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ : 31–07–2008 ರ ಭಾಗ–3, ಪುಟ ಸಂಖ್ಯೆ : 2957 ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿತ್ತು.

ಈ ಮಧ್ಯೆ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ರದುರ್ಗ ಇವರಲ್ಲಿ ಪತ್ರ ವ್ಯವಹರಿಸಿದಾಗ, ಸದರಿಯವರು ನೊಂದಣಿ ಸಂಖ್ಯೆ : ಕೆಎ–16–ಎಂ–144 ರ ವಾಹನದ ಬಿ ವಹಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ, ವಾಹನವು ಮೊಹಮದ್ ಅಶೀಷ್ ಬಿನ್. ಅಮೀರ್ ಸಾಬ್, ಜಾನಕಲ್ಲು, ಹೊಸದುರ್ಗ ಎಂಬುವರ ಹೆಸರಿನಲ್ಲಿರುತ್ತದೆ ಎಂಬುದಾಗಿ, ಹಾಗೂ ದಿನಾಂಕ : 16–07–2001 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಗೆ ಸಿಸಿ ನೀಡಲಾಗಿದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ, ಶ್ರೀ ಮಹಮದ್ ಅಶೀಷ್ ಇವರಿಗೆ ಈ ಕಚೇರಿಯಿಂದ ದಿನಾಂಕ : 21–08–2008ರಂದು ಕಾರಣ ಕೇಳುವ ಪತ್ರವನ್ನು ಜಾರಿ ಮಾಡಿದಾಗಿ, ಸದರಿ ಪತ್ರ ಜಾರಿಯಾಗಿ ಸ್ವೀಕೃತಿ ಈ ಕಛೇರಿಯಲ್ಲಿ ಸ್ವೀಕೃತವಾಗಿರುತ್ತದೆ.

ಸದರಿ ಪತ್ರಕ್ಕೆ ಯಾವುದೇ ಉತ್ತರ ಬಾರದೇ ಇರುವುದರಿಂದ ಪುನಃ ದಿನಾಂಕ : 03–03–2009 ರಂದು ಮಹಮದ್ ಅಶೀಷ್ ಇವರಿಗೆ ಇನ್ನೊಂದು ನೋಟೀಸ್ ನೀಡಿದ್ದು, ಸದರಿ ಪತ್ರ ಸ್ವೀಕರಿಸಿದ್ದರೂ ಸಹ ಸದರಿ ಪತ್ರಕ್ಕೂ ಯಾವುದೇ ಉತ್ತರ ನೀಡಿರುವುದಿಲ್ಲ. ಈ ಮಧ್ಯೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಿಗೆ ಪತ್ರ ಬರೆದು ವಾಹನದ ಇತ್ತೀಚಿನ ವಾರಸುದಾರರ ಹೆಸರು ವಿಳಾಸದ ಬಿ ವಹಿಯನ್ನು ಈ ಕಛೇರಿಗೆ ಕಳುಹಿಸಿಕೊಡುವಂತೆ ಪತ್ರ ಬರೆಯಲಾಗಿತ್ತು. ಅದಕ್ಕೆ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ಸದರಿ ವಾಹನವು ಶ್ರೀ ಎ.ಹೆಚ್. ನವೀನ್

ಬಿನ್.ಎ.ಎಸ್. ಹಾಲೇಶ್, ರೂಪಶ್ರೀ, 2ನೇ ಮೈನ್ ತಿಲಕ್ ನಗರ, ಶಿವಮೊಗ್ಗ ಇವರ ಹೆಸರಿನಲ್ಲಿರುತ್ತದೆಂದು ಹಾಗೂ ದಿನಾಂಕ : 11–10–2001 ರಂದು ಸಹಾಯಕ ಸಾರಿಗೆ ಅಧಿಕಾರಿಗಳು, ಸಾಗರ ಇವರಿಗೆ ಸಿ.ಸಿ.ಯನ್ನು ಕಳುಹಿಸಿಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಅನಂತರ ಸಹಾಯಕ ಸಾರಿಗೆ ಅಧಿಕಾರಿಗಳು, ಸಾಗರ ಇವರಿಗೆ ಪತ್ರ ಬರೆದು ಮಾಹಿತಿಯನ್ನು ಪಡೆದಾಗ, ವಾಹನವು ದಿನಾಂಕ : 14–05–2007 ರಿಂದ ಶ್ರೀ ಅಶೋಕ ಬಿನ್. ಹಾಲಪ್ಪ, ನೆಹರು ನಗರ, ಸಾಗರ ಇವರ ಹೆಸರಿನಲ್ಲಿದ್ದು, ದಿನಾಂಕ : 12–10–2010 ರಿಂದ ಶ್ರೀ ನಾರಾಯಣರಾವ್ ಬಿನ್ ರಂಗೋಜಿರಾವ್, ಶ್ರೀ ಶಾರದ ಮೋಟಾರ್ ಡ್ರೈವಿಂಗ್ ಸ್ಕೂಲ್, ಸಾಗರ ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿದ ಮೇರೆಗೆ, ನಾರಾಯಣರಾವ್ ಬಿನ್. ರಂಗೋಜಿರಾವ್, ಸಾಗರ ಇವರಿಗೆ ಈ ಕಛೇರಿಯಿಂದ ದಿನಾಂಕ : 21–03–2011 ಮತ್ತು ದಿನಾಂಕ : 05–01–2013 ರಂದು ಕಾರಣ ಕೇಳುವ ಪತ್ರವನ್ನು ಜಾರಿ ಮಾಡಲಾಗಿರುತ್ತದೆ. ಸದರಿ ಪತ್ರಗಳನ್ನು ಸ್ವೀಕರಿಸಿದ್ದರೂ ಸಹ ಸದರಿ ಪತ್ರಕ್ಕೆ ಯಾವುದೇ ಉತ್ತರ ಬಂದಿರುವುದಿಲ್ಲ. ಈ ಮಧ್ಯೆ ಶ್ರೀ ಅಶೋಕ್ ಬಿನ್ ಹಾಲಪ್ಪ, ಸಾಗರ ಇವರಿಗೆ ದಿನಾಂಕ : 02–09–2011 ಮತ್ತು 05–01–2013 ರಂದು ಕಾರಣ ಕೇಳುವ ಪತ್ರವನ್ನು ಅಂಚೆ ಮುಖಾಂತರ ಕಳುಹಿಸಿದ್ದು, ನಾಟ್ ನೋನ್ ಎಂಬ ಅಂಚೆ ಷರಾದೊಂದಿಗೆ ಪತ್ರ ಜಾರಿಯಾಗದೆ ವಾಪಸ್ಸು ಬಂದಿರುತ್ತದೆ.

ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸ್ವತ್ತೆಂದು ಭಾವಿಸಬೇಕಾಗುತ್ತದೆ. ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಸಾಬೀತು ಮಾಡುವ ಹೊಣೆಯನ್ನು ಹೊರಬೇಕಾಗುತ್ತದೆ.

ಮುಂದುವರೆದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರು ಸಹ ವಾಹನ ಮಾಲೀಕರು ಸಂಬಂಧಪಟ್ಟ ಮೂಲ ದಾಖಲಾತಿಗಳನ್ನು ಹಾಜರ್ ಪಡಿಸಿ ತಾವು ತಪ್ಪಿತಸ್ಥರಲ್ಲವೆಂದು ಸಾಬೀತು ಪಡಿಸಲು ವಿಫಲರಾಗಿರುತ್ತಾರೆ. ಹಾಗೂ ವಾಹನವನ್ನು ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ಸುಸ್ಥಿತಿಯಲ್ಲಿ ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲೀಕತ್ವವನ್ನು ಸಾಬೀತು ಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬಾರದೇ ಇರುವುದರಿಂದ, ಇನ್ನು ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ, ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಬಾವಿಸಬಹುದಾಗಿರುತ್ತದೆ. ಅಲ್ಲದೆ ದಿನಾಂಕ : 01–03–2008 ರಂದು ವಾಹನದಲ್ಲಿ ಅಕ್ರಮವಾಗಿ ಬೀಟೆ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಪಿರ್ಯಾದುದಾರರು ಪತ್ತೆಹಚ್ಚಿ ಸ್ಥಳ ಪಂಚನಾಮೆಯೊಂದಿಗೆ ಅಕ್ರಮ ಬೀಟೆ ತುಂಡುಗಳನ್ನು ಹಾಗೂ ವಾಹನವನ್ನು ವಶಪಡಿಸಿಕೊಂಡು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ, ಹಾಗೂ ಈ ಪ್ರಕರಣದಲ್ಲಿ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ತಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಬೀಟೆ ತುಂಡುಗಳು ಅರಣ್ಯ ಕಾಯ್ದೆ 80 ರಂತೆ ಸರ್ಕಾರದ ಸ್ವತ್ತೆಂದು ರುಜುವಾತಾಗಿರುತ್ತದೆ.

ಆದ್ದರಿಂದ, ದಿನಾಂಕ : 01–03–2008 ರಂದು ಮಾರುತಿ ವ್ಯಾನ್ ನೊಂದಣಿ ಸಂಖ್ಯೆ : ಕೆಎ–16–ಎಂ–144 ರಲ್ಲಿ ಅಕ್ರಮವಾಗಿ ಬೀಟೆ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯವೆಂದು ನಿರ್ಣಯಿಸಿ ಏಕಪಕ್ಷೀಯ ನಿರ್ಣಯ ಕೈಗೊಂಡು, ಸದರಿ ವಾಹನ ಮತ್ತು ಬೀಟೆ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಮೇರೆಗೆ ಶ್ರೀ ಡಿ.ಎಲ್. ಗಣಪತಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಅರಣ್ಯ ಮೊಕದ್ದಮೆ ಸಂಖ್ಯೆ : 61/2007–08, ದಿನಾಂಕ : 01–03–2008 ರಂದು ವಶಪಡಿಸಿಕೊಂಡ ವಾಹನ ಮಾರುತಿ ವ್ಯಾನ್ ನೊಂದಣಿ ಸಂಖ್ಯೆ : ಕೆಎ–16–ಎಂ–144 (ಚಾಸ್ಸಿ ಸಂಖ್ಯೆ : ಎಸ್‌ಟಿ–91ಐಎನ್ 887686, ಇಂಜಿನ್ ಸಂಖ್ಯೆ : ಎಫ್8 ಬಿ.ಐಎನ್.670705) ಮತ್ತು ಬೀಟೆ ತುಂಡು 05=0.239 ಎಂ3 ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಬೀಟೆ ತುಂಡುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ. ಮುಟ್ಟುಗೋಲು ಹಾಕಿಕೊಂಡ ಬೀಟೆ ತುಂಡು 05=0.239 ಎಂ3 ಮುದ್ದೆಮಾಲನ್ನು ಈ ಪ್ರಕರಣದಲ್ಲಿ ಆಪಾದಿತರ ಮೇಲೆ ನ್ಯಾಯಾಲಯದಲ್ಲಿ ನಡೆಯುತ್ತಿರುವ ಕ್ರಿಮಿನಲ್ ಮೊಕದ್ದಮೆ ಮುಕ್ತಾಯವಾಗುವವರೆವಿಗೂ ಕಾಯ್ದುಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ : 10–07–2013 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಭಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ : 10–07–2013 ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಡಿ.ಎಲ್. ಗಣಪತಿ**

P.R. 2240

ಅಧಿಕೃತ ಅಧಿಕಾರ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

### ಭೂಸ್ವಾಧೀನ ಕಾಯ್ದೆ ಕಲಂ. 4(1) ರ ಅನ್ವಯ ಅಧಿಸೂಚನೆ

**ಕ್ರಮಾಂಕ: ಕಗೃಮಂ. ಭೂಸ್ವಾಬೆಂ/ ಸೂ.ನ4(ಕಾ) 17 /2013-14. ದಿನಾಂಕ: 19-10-2013**

ಈ ಅದಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಕರ್ನಾಟಕ ಗೃಹ ಮಂಡಳಿಯ ಚಟುವಟಿಕೆಗಳಿಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡು ಬಂದಿದೆ.

1991 ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು,ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರಿಗೆ ಮತ್ತು ಇವರ ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಭೂಸ್ವಾಧೀನ ಕಾಯ್ದೆ 5(ಎ) ವಿಧಿಯನ್ವಯ ಅಧಿಕಾರ ನೀಡಿರುವ ವಿಶೇಷ ಭೂಸ್ವಾಧೀನ ಅಧಿಕಾರಿಗಳು ಕರ್ನಾಟಕ ಗೃಹ ಮಂಡಳಿ, ಬೆಂಗಳೂರು. ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ, ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

### ಪರಿಶಿಷ್ಟ

**ಜಿಲ್ಲೆ: ಬೆಂಗಳೂರು ತಾಲ್ಲೂಕು: ಆನೇಕಲ್ ಹೋಬಳಿ: ಜಿಗಣಿ ಗ್ರಾಮ: ಕಾಡುಜಕ್ಕನ ಹಳ್ಳಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1. | ಮಳ್ಳೆಪ್ಪಚಾರಿ | ಮಳ್ಳೆಪ್ಪಚಾರಿ | **1/1 ರ ಪೈಕಿ** | ಖುಷ್ಕಿ | ಸರ್ವೆ ನಂ. 2 | ಸರ್ವೆ ನಂ. 92 | ಸರ್ವೆ ನಂ. 3 | ಸ. ನಂ. 1 ರ ಉಳಿಕೆ | **0.10** **0.02 (ಖ) ಬ** | 1.23 |
| 2. | ಎಂ.ವೀರಭದ್ರಪ್ಪ ಬಿನ್ ಲೇ. ಮಾರಪ್ಪ | ಎಂ.ವೀರಭದ್ರಪ್ಪ | **3/1** | ಖುಷ್ಕಿ | ಸರ್ವೆ ನಂ. 3/3 | ಸರ್ವೆ ನಂ. 91 | ಸರ್ವೆ ನಂ. 54 | ಸರ್ವೆ ನಂ. 3/2 | **0.23** **0.01(ಖ) ಬ** | 0.80 |
| 3. | ಎಂ.ವೀರಭದ್ರಪ್ಪ ಬಿನ್ ಲೇ. ಮಾರಪ್ಪ | ಎಂ.ವೀರಭದ್ರಪ್ಪ | **3/2** | ಖುಷ್ಕಿ | ಸರ್ವೆ ನಂ. 3/3 | ಸರ್ವೆ ನಂ. 91 | ಸರ್ವೆ ನಂ. 3/1, 3 | ಸರ್ವೆ ನಂ. 3/3 | **0.25** **0.01(ಖ) ಬ** | 1.45 |
| 4. | ಬಿ.ಸಿ ಪ್ರಭಾಕರ್ ಬಿನ್ ಲೇ. ಬಿ ಚಂದ್ರಶೇಖರಯ್ಯ | ಮಾರಪ್ಪ, ಮಾದಪ್ಪ, ಯಲ್ಲಪ್ಪ, ಬಿ.ಸಿ. ಪ್ರಭಾಕರ್ | **3/3** | ಖುಷ್ಕಿ | ಸರ್ವೆ ನಂ. 54 | ಸರ್ವೆ ನಂ. 91 | ಸರ್ವೆ ನಂ. 54, 3/2 | ಸರ್ವೆ ನಂ. 3/5 | **1.37** **0.01 (ಖ) ಬ** | 3.42 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 5. | ಜಗಮ್ಮ ಕೋಂ ಲೇ. ಮಾರಪ್ಪ, ಮಾದಪ್ಪ, ಯಲ್ಲಪ್ಪ ಬಿನ್ ಲೇ. ಗುಂಡಪ್ಪ | ಮಾರಪ್ಪ, ಮಾದಪ್ಪ, ಯಲ್ಲಪ್ಪ, ಜಗಮ್ಮ, ಮಾದಪ್ಪ | **3/4** | ಖುಷ್ಕಿ | ಸರ್ವೆ ನಂ. 54 | ಸರ್ವೆ ನಂ. 3/3 | ಸರ್ವೆ ನಂ. 3/3 | ಸರ್ವೆ ನಂ. 3/3 | **0.07 0.01 (ಖ) ಬ** | 0.86 |
| 6. | ಯಲ್ಲಪ್ಪ ಬಿನ್ ಲೇ.ಗುಂಡಪ್ಪ, ಮಾದಪ್ಪ ಬಿನ್ ಲೇ.ಗುಂಡಪ್ಪ, ಮಾರಕ್ಕ, ಪಾಪಮ್ಮ, ನಾರಾಯಣಮ್ಮ ಬಿನ್ ಲೇ. ಭೋಳಯ್ಯ, ಜಗಮ್ಮ | ಮಾರಪ್ಪ, ಮಾದಪ್ಪ, ಯಲ್ಲಪ್ಪ, ಮಾರಕ್ಕ, ಪಾಪಮ್ಮ, ನಾರಾಯಣಮ್ಮ | **3/5** | ಖುಷ್ಕಿ | ಸರ್ವೆ ನಂ. 4 | ಸರ್ವೆ ನಂ. 91 | ಸರ್ವೆ ನಂ. 3/3 | ಸರ್ವೆ ನಂ. 3/6 | **1.37 0.03 (ಖ) ಬ** | 2.65 |
| 7. | ಬೆಟ್ಟಪ್ಪ ಬಿನ್ ಉರುಗಯ್ಯ | ಬೆಟ್ಟಪ್ಪ | **3/6** | ಖುಷ್ಕಿ | ಸರ್ವೆ ನಂ. 4 | ಸರ್ವೆ ನಂ. 91 | ಸರ್ವೆ ನಂ. 3/5 | ಸರ್ವೆ ನಂ. 1 ಮತ್ತು 2 | **0.33 0.01 (ಖ) ಬ** | 1.14 |
| 8. | ಮುನಿನಂಜಪ್ಪ ಕೋಂ ಲೇ. ಚಿನ್ನಪ್ಪ | ಮುನಿನಂಜಪ್ಪ | **4/1** | ಖುಷ್ಕಿ | ಸರ್ವೆ ನಂ. 54 | ಸರ್ವೆ ನಂ. 3 | ಸರ್ವೆ ನಂ. 3,54 | ಸರ್ವೆ ನಂ. 4/2 | **2.18** | 3.36 |
| 9. | ಭೈರಪ್ಪ ಬಿನ್ ಭೈರಪ್ಪ, ನಾಗಪ್ಪ ಬಿನ್ ಭೈರಪ್ಪ | ಭೈರಪ್ಪ, ನಾಗಪ್ಪ | **4/2** | ಖುಷ್ಕಿ | ಸರ್ವೆ ನಂ. 5 | ಸರ್ವೆ ನಂ. 3,2 | ಸರ್ವೆ ನಂ. 4/1 | ಸರ್ವೆ ನಂ. 5 | **2.17** | 3.38 |
| 10. | ಬೈರಪ್ಪ ಬಿನ್ ಬಸಪ್ಪ | ಬೈರಪ್ಪ | **5/1 ರ ಪೈಕಿ** | ಖುಷ್ಕಿ | ಸರ್ವೆ ನಂ. 7,8 | ಸರ್ವೆ ನಂ. 2,4 | ಸರ್ವೆ ನಂ. 54 | ಸರ್ವೆ ನಂ. 6 | **0.34** | 1.24 |
| 11. | ರಾಮಯ್ಯ ಬಿನ್ ನಂಜಪ್ಪ, ಚಿಕ್ಕಣ್ಣ | ರಾಮಯ್ಯ, ಚಿಕ್ಕಣ್ಣ | **7/1 ರ ಪೈಕಿ** | ಖುಷ್ಕಿ | ಸರ್ವೆ ನಂ. 33 | ಸರ್ವೆ ನಂ. 5,6 | ಸರ್ವೆ ನಂ. 8 | ಸರ್ವೆ ನಂ. 34,35 | **1.28** | 2.07 |
| 12. | ಚೆನ್ನಪ್ಪ ಬಿನ್ ಲೇ. ಚಿನ್ನಪ್ಪ, ಕೆಂಪಯ್ಯ ಬಿನ್ ಲೇ. ಚಿನ್ನಪ್ಪ, ಮುನಿನಂಜಪ್ಪ ಬಿನ್ ಲೇ. ಚಿನ್ನಪ್ಪ, ರಮೇಶ್ ಬಿನ್ ಲೇ. ಪಾಪಕ್ಕಿ | ಚೆನ್ನಪ್ಪ, ಕೆಂಪಯ್ಯ, ಮುನಿನಂಜಪ್ಪ, ರಮೇಶ್ | **8/1** | ಖುಷ್ಕಿ | ಹಳ್ಳ | ಸರ್ವೆ ನಂ. 5 | ಸರ್ವೆ ನಂ. 54 | ಸರ್ವೆ ನಂ. 8/2, 3 | **0.36** | 1.61 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 13. | ರುದ್ರಪ್ಪ ಬಿನ್ ಚಿಕ್ಕಮಾದಪ್ಪ | ರುದ್ರಪ್ಪ | **8/2** | ಖುಷ್ಕಿ | ಸರ್ವೆ ನಂ. 8/1 | ಸರ್ವೆ ನಂ. 5 | ಸರ್ವೆ ನಂ. 8/1 | ಸರ್ವೆ ನಂ. 8/3 | **0.25** | 1.11 |
| 14. | ಪುಟ್ಟಹೊನ್ನಪ್ಪ ಬಿನ್ ಅಂಬೂಶೆಟ್ಟರ್, ಗೌರಮ್ಮ ಕೋಂ ಲೇ. ವೀರಭದ್ರಪ್ಪ | ಪುಟ್ಟಹೊನ್ನಪ್ಪ, ಗೌರಮ್ಮ | **8/3** | ಖುಷ್ಕಿ | ಹಳ್ಳ | ಸರ್ವೆ ನಂ. 5 | ಸರ್ವೆ ನಂ. 8/1,2 | ಸರ್ವೆ ನಂ. 7, 33 ಹಳ್ಳ | **1.07** | 2.10 |
| 15. | ಕೆಂಚಪ್ಪ ಬಿನ್ ಮಾರಪ್ಪ | ಮುನಿ ವೀರಪ್ಪ ಉ ಪುಟ್ಟೀರಪ್ಪ, ಕೆಂಚಪ್ಪ | **9/1A** | ತರಿ | ಸರ್ವೆ ನಂ. 54 | ಸರ್ವೆ ನಂ. 9/2,3,4 | ಸರ್ವೆ ನಂ. 54 | ಸರ್ವೆ ನಂ. 54, ಹಳ್ಳ | **0.16** | 0.76 |
| 16. | ಮುನಿಶಾಮಪ್ಪ ಬಿನ್ ಈರಪ್ಪ | ಮುನಿಶಾಮಪ್ಪ | **9/1B** | ತರಿ | ಸರ್ವೆ ನಂ. 54 | ಸರ್ವೆ ನಂ. 9/2,3,4 | ಸರ್ವೆ ನಂ. 54 | ಸರ್ವೆ ನಂ. 54, ಹಳ್ಳ | **0.23**<br>**0.01 (ಖ) ಬ** | 1.04 |
| 17. | ಹೊಸಣ್ಣ ಬಿನ್ ಲೇ. ಹೊಸಬಂಟಪ್ಪ | ಹೊಸಣ್ಣ | **9/2** | ತರಿ | ಸರ್ವೆ ನಂ. 9/1 | ಹಳ್ಳ | ಹಳ್ಳ ,ಸರ್ವೆ ನಂ. 9/3 | ಹಳ್ಳ | **0.06** | 0.29 |
| 18. | ಎಂ. ವೀರಭದ್ರಪ್ಪ ಬಿನ್ ಲೇ. ಮಾದಪ್ಪ | ಎಂ. ವೀರಭದ್ರಪ್ಪ | **9/3** | ತರಿ | ಸರ್ವೆ ನಂ. 9/1 | ಹಳ್ಳ | ಸರ್ವೆ ನಂ. 9/4 | ಸರ್ವೆ ನಂ. 9/3 | **0.04** | 0.19 |
| 19. | ಲಿಂಗಪ್ಪ ಬಿನ್ ಮುನಿಸ್ವಾಮಪ್ಪ | ಲಿಂಗಪ್ಪ | **9/4** | ತರಿ | ಸರ್ವೆ ನಂ. 9/1, 54 | ಹಳ್ಳ | ಸರ್ವೆ ನಂ. 54 | ಸರ್ವೆ ನಂ. 9/3 | **0.07** | 0.34 |
| 20. | ಮಾರಪ್ಪ, ಮಾದಪ್ಪ, ಯಲ್ಲಪ್ಪ | ಮಾರಪ್ಪ, ಮಾದಪ್ಪ, ಯಲ್ಲಪ್ಪ | **10/1** | ತರಿ | ಹಳ್ಳ | ಸರ್ವೆ ನಂ. 33 | ಹಳ್ಳ | ಸರ್ವೆ ನಂ. 10/2 | **0.01** | 0.05 |
| 21. | ಎಂ. ತಿಮ್ಮರಾಯಪ್ಪ ಬಿನ್ ಮುನಿಯಪ್ಪ | ಎಂ. ತಿಮ್ಮರಾಯಪ್ಪ | **10/2A** | ತರಿ | ಸರ್ವೆ ನಂ. 10/3,4,5 | ಸರ್ವೆ ನಂ. 33 | ಹಳ್ಳ, ಸರ್ವೆ ನಂ. 10/1 | ಸರ್ವೆ ನಂ. 22 | **0.08** | 0.32 |
| 22. | ಬಿ. ಕರಿಯಪ್ಪ ಬಿನ್ ಬೆಂಗಳೂರಪ್ಪ | ಬಿ. ಕರಿಯಪ್ಪ | **10/2B** | ತರಿ | ಸರ್ವೆ ನಂ. 10/3,4,5 | ಸರ್ವೆ ನಂ. 33 | ಹಳ್ಳ, ಸರ್ವೆ ನಂ. 10/1 | ಸರ್ವೆ ನಂ. 22 | **0.07**<br>**0.01 (ಖ) ಬ** | 0.36 |
| 23. | ಗುಂಡಪ್ಪ ಬಿನ್ ಮುನಿಯಪ್ಪ | ಗುಂಡಪ್ಪ | **10/3** | ತರಿ | ಸರ್ವೆ ನಂ. 10/6 | ಸರ್ವೆ ನಂ. 10/2 | ಹಳ್ಳ | ಸರ್ವೆ ನಂ. 10/4 | **0.02** | 0.09 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 24. | ನರಸಿಂಹಯ್ಯ ಬಿನ್ ಗುಂಡಪ್ಪ | ನರಸಿಂಹಯ್ಯ | **10/4** | ತರಿ | ಸರ್ವೆ ನಂ. 10/6 | ಸರ್ವೆ ನಂ. 10/2 | ಸರ್ವೆ ನಂ. 10/3 | ಸರ್ವೆ ನಂ. 10/5 | **0.02** | 0.09 |
| 25. | ನರಸಿಂಹಯ್ಯ ಬಿನ್ ಗುಂಡಪ್ಪ | ನರಸಿಂಹಯ್ಯ | **10/5** | ತರಿ | ಸರ್ವೆ ನಂ. 10/6 | ಸರ್ವೆ ನಂ. 10/2 | ಸರ್ವೆ ನಂ. 10/4 | ಸರ್ವೆ ನಂ. 22 | **0.02** | 0.09 |
| 26. | ಹೊಸಣ್ಣ ಬಿನ್ ಲೇ. ಹೊಸಬಂಟಪ್ಪ | ಹೊಸಣ್ಣ | **10/6** | ತರಿ | ಸರ್ವೆ ನಂ. 11,12 | ಸರ್ವೆ ನಂ. 10/3,4,5 | ಹಳ್ಳ | ಸರ್ವೆ ನಂ. 22 | **0.03** | 0.14 |
| 27. | ಹೊಸಭಂಟಪ್ಪ ಬಿನ್ ಆರ್. ನಂಜಪ್ಪ, ವೀರಭದ್ರಪ್ಪ ಬಿನ್ ಆರ್. ನಂಜಪ್ಪ | ಹೊಸಭಂಟಪ್ಪ ವೀರಭದ್ರಪ್ಪ | **11** | ತರಿ | ಸರ್ವೆ ನಂ. 14 | ಸರ್ವೆ ನಂ. 10 | ಸರ್ವೆ ನಂ. 12,ನಾಲ | ಸರ್ವೆ ನಂ. 21,22 | **0.27** | 1.35 |
| 28. | ನಾಗಪ್ಪ ಬಿನ್ ಮುನಿಯಪ್ಪ, ಮುನಿಯಮ್ಮ ಕೋಂ ನಾಗಪ್ಪ | ಚಿಕ್ಕಣ್ಣ, ಹೊಟ್ಯಪ್ಪ, ಮುನಿಶ್ಯಾಮಪ್ಪ, ಬೆಟ್ಟಮ್ಮ, ನಾಗಪ್ಪ, ಮುನಿಯಮ್ಮ | **12** | ತರಿ | ಸರ್ವೆ ನಂ. 14, ನಾಲ | ಸರ್ವೆ ನಂ. 10 | ಸರ್ವೆ ನಂ. 9,13,ನಾಲ | ಸರ್ವೆ ನಂ. 11 | **0.08** | 0.38 |
| 29. | ಆರ್. ವೆಂಕೊಬರಾವ್, ಹೊಸಬಂಟಪ್ಪ ಬಿನ್ ಆರ್. ನಂಜಪ್ಪ ಗುಳ್ಳಪ್ಪ ಬಿನ್ ಮುನೆಪ್ಪ | ಹೊಸಬಂಟಪ್ಪ, ಗುಳ್ಳಪ್ಪ, ಆರ್. ವೆಂಕೊಬರಾವ್, ಹೊಸಬಂಟಪ್ಪ | **13** | ತರಿ | ಸರ್ವೆ ನಂ. 54 | ಸರ್ವೆ ನಂ. 12,11 | ಸರ್ವೆ ನಂ. 54 | ಸರ್ವೆ ನಂ. 14 | **0.23**<br>**0.01 (ಖ) ಬ** | 1.20 |
| 30. | ಅಗದೂರಪ್ಪ ಉ ಮರಿಯಪ್ಪ | ಅಗದೂರಪ್ಪ ಉ ಮರಿಯಪ್ಪ | **14/1** | ತರಿ | ಸರ್ವೆ ನಂ. 15, 14/2 | ಹಳ್ಳ | ಹಳ್ಳ | ಸರ್ವೆ ನಂ. 11,21 | **0.21**<br>**0.01 (ಖ) ಬ** | 1.00 |
| 31. | ಕೆಂಚಪ್ಪ ಬಿನ್ ಲೇ.ಮಾರಪ್ಪ | ಕೆಂಚಪ್ಪ | **14/2** | ತರಿ | ಸರ್ವೆ ನಂ. 15 | ಸರ್ವೆ ನಂ. 14/1 | ಸರ್ವೆ ನಂ. 15 | ಸರ್ವೆ ನಂ. 21 | **0.02** | 0.10 |
| 32. | ಎಂ. ಶ್ರೀನಿವಾಸ್ ಬಿನ್ ಮುನಿಸ್ವಾಮಿ | ಚಿಕ್ಕಣ್ಣ, ಎಂ. ಶ್ರೀನಿವಾಸ್ | **15/1** | ತರಿ | ಸರ್ವೆ ನಂ. 15/2 | ಸರ್ವೆ ನಂ. 14 | ಹಳ್ಳ | ಸರ್ವೆ ನಂ. 15/13 | **0.08**<br>**0.01(ಖ) ಅ** | 0.80 |
| 33. | ಪುಟ್ಟರಾಜಮ್ಮ ಬಿನ್ ಲೇ. ಸಂಪಮ್ಮ | ಪುಟ್ಟರಾಜಮ್ಮ | **15/2** | ತರಿ | ಸರ್ವೆ ನಂ. 15/3 | ಸರ್ವೆ ನಂ. 15/1 | ಹಳ್ಳ | ಸರ್ವೆ ನಂ. 15/13 | **0.09**<br>**0.01(ಖ) ಅ** | 0.45 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಎ–ಗುಂ | ರೂ.ಪೈ |
| 34. | ಮರಿಯಪ್ಪ ಬಿನ್ ಕಾಕಣ್ಣ, ಪುಟ್ಟರಾಜಮ್ಮ ಬಿನ್ ಲೇ. ಸುಂಚಮ್ಮ | ಪುಟ್ಟರಾಜಮ್ಮ, ಮರಿಯಪ್ಪ | **15/3** | ತರಿ | ಸರ್ವೆ ನಂ. 15/4 | ಸರ್ವೆ ನಂ. 15/2 | ಹಳ್ಳ | ಸರ್ವೆ ನಂ. 15/13 | **0.07** | 0.85 |
| 35. | ಬಿ. ವೆಂಕಟ ರಮಣ ಚಾರ್ | ಬಿ. ವೆಂಕಟ ರಮಣ ಚಾರ್ | **15/4** | ತರಿ | ಸರ್ವೆ ನಂ. 5 | ಸರ್ವೆ ನಂ. 3 | ಹಳ್ಳ | ಸರ್ವೆ ನಂ. 15/13 | **0.08** | 0.40 |
| 36. | ದೊಡ್ಡಚನ್ನಯ್ಯ, ಮಳ್ಳಿ ವೆಂಕಟರಮಣಚಾರಿ | ದೊಡ್ಡಚನ್ನಯ್ಯ, ಮಳ್ಳಿ ವೆಂಕಟರಮಣಚಾರಿ | **15/5** | ತರಿ | ಸರ್ವೆ ನಂ. 15/6,7,8 | ಸರ್ವೆ ನಂ. 15/4 | ಹಳ್ಳ | ಸರ್ವೆ ನಂ. 15/13,10 | **0.07**<br>**0.01(ಖ)** ಅ | 0.35 |
| 37. | ಮರಿಯಪ್ಪ ಬಿನ್ ಕಾಕಣ್ಣ | ಮರಿಯಪ್ಪ | **15/6** | ತರಿ | ಸರ್ವೆ ನಂ. 16 | ಸರ್ವೆ ನಂ. 15/5 | ಹಳ್ಳ | ಸರ್ವೆ ನಂ. 15/7 | **0.10** | 0.50 |
| 38. | ಪುಟ್ಟರಾಜಮ್ಮ ಬಿನ್ ಸುಂಚಮ್ಮ | ಪುಟ್ಟರಾಜಮ್ಮ | **15/7** | ತರಿ | ಸರ್ವೆ ನಂ. 16 | ಸರ್ವೆ ನಂ. 15/5 | ಸರ್ವೆ ನಂ. 15/6 | ಸರ್ವೆ ನಂ. 15/8 | **0.03** | 0.30 |
| 39. | ಪುಟ್ಟರಾಜಮ್ಮ ಬಿನ್ ಸುಂಚಮ್ಮ | ಪುಟ್ಟರಾಜಮ್ಮ | **15/8** | ತರಿ | ಸರ್ವೆ ನಂ. 16 | ಸರ್ವೆ ನಂ. 15/5 | ಸರ್ವೆ ನಂ. 15/7 | ಸರ್ವೆ ನಂ. 15/10 | **0.02** | 0.10 |
| 40. | ಪುಟ್ಟರಾಜಮ್ಮ ಬಿನ್ ಸುಂಚಮ್ಮ, ಕರಿಯಲ್ಲಪ್ಪ | ಪುಟ್ಟರಾಜಮ್ಮ, ಮರಿಯಪ್ಪ, ಕರಿಯಲ್ಲಪ್ಪ | **15/9** | ತರಿ | ಸರ್ವೆ ನಂ. 15/10 | ಸರ್ವೆ ನಂ. 15/15 | ಸರ್ವೆ ನಂ. 15/4,5 | ಸರ್ವೆ ನಂ. 19 | **0.04** | 0.20 |
| 41. | ಪುಟ್ಟರಾಜಮ್ಮ ಬಿನ್ ಸುಂಚಮ್ಮ | ಪುಟ್ಟರಾಜಮ್ಮ | **15/10** | ತರಿ | ಸರ್ವೆ ನಂ. 15/12,16 | ಸರ್ವೆ ನಂ. 15/9, | ಸರ್ವೆ ನಂ. 15/5,8 | ಸರ್ವೆ ನಂ. 15/12,19 | **0.06** | 0.30 |
| 42. | ನಾಗಲಿಂಗಚಾರಿ | ನಾಗಲಿಂಗಚಾರಿ | **15/11** | ತರಿ | ಸರ್ವೆ ನಂ. 15/15, | ಸರ್ವೆ ನಂ. 15/13, | ಸರ್ವೆ ನಂ. 15/13, | ಸರ್ವೆ ನಂ. 20, | **0.02** | 0.10 |
| 43. | ಪುಟ್ಟರಾಜಮ್ಮ ಬಿನ್ ಸುಂಚಮ್ಮ | ಪುಟ್ಟರಾಜಮ್ಮ | **15/12** | ತರಿ | ಸರ್ವೆ ನಂ. 16, | ಸರ್ವೆ ನಂ. 15/10, | ಸರ್ವೆ ನಂ. 15/10, | 19 | **0.11** | 0.55 |
| 44. | ದೊಡ್ಡವೆಂಕರಮಣಪ್ಪ, ಲಕ್ಷ್ಮಮ್ಮ ಕೋಂ. ವೆಂಕರಮಣಪ್ಪ, ಪುಟ್ಟರಾಜಮ್ಮ ಬಿನ್ ಸುಂಚಮ್ಮ, ಜಿ. ಕೃಷ್ಣಪ್ಪ ಬಿನ್ ಜೀಯಪ್ಪ | ದೊಡ್ಡವೆಂಕರಮಣಪ್ಪ, ಲಕ್ಷ್ಮಮ್ಮ, ಪುಟ್ಟರಾಜಮ್ಮ, ಜಯಪ್ಪ, ಜಿ. ಕೃಷ್ಣಪ್ಪ | **15/13** | ತರಿ | ಸರ್ವೆ ನಂ. 15/11,15 | ಸರ್ವೆ ನಂ. 15/14, | ಸರ್ವೆ ನಂ. 15/1,2,3 | ಸರ್ವೆ ನಂ. 20 | **0.10** | 0.50 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 45. | ಮಹದೇವಮ್ಮ ಕೋಂ ವೀರಭದ್ರಪ್ಪ | ಮಹದೇವಮ್ಮ | **15/14** | ತರಿ | ಸರ್ವೆ ನಂ. 15/13, | ಸರ್ವೆ ನಂ. 14, | ಸರ್ವೆ ನಂ. 15/13, | ಸರ್ವೆ ನಂ. 18 | **0.05**<br>**0.01(ಖ) ಅ** | 0.25 |
| 46. | ಕರಿಯಲ್ಲಪ್ಪ | ದೊಡ್ಡಚನ್ನಪ್ಪ, ಕರಿಯಲ್ಲಪ್ಪ | **15/15** | ತರಿ | ಸರ್ವೆ ನಂ. 15/9 | ಸರ್ವೆ ನಂ. 15/11, | ಸರ್ವೆ ನಂ. 15/13,14, | ಸರ್ವೆ ನಂ. 19,20 | **0.03** | 0.15 |
| 47. | ಮುನಿರೆಡ್ಡಿ | ಮುನಿರೆಡ್ಡಿ | **16/1** | ತರಿ | ಸರ್ವೆ ನಂ. 18 | ಸರ್ವೆ ನಂ. 15 | ಸರ್ವೆ ನಂ. 17 | ಸರ್ವೆ ನಂ. 18,16/2 | **1.25** | 3.08 |
| 48. | ಮುನಯ್ಯ | ಮುನಯ್ಯ | **16/2** | ತರಿ | ಸರ್ವೆ ನಂ. 16/1 | ಸರ್ವೆ ನಂ. 15 | ಸರ್ವೆ ನಂ. 16/1 | ಸರ್ವೆ ನಂ. 18, | **0.08** | 0.38 |
| 49. | ಕೃಷ್ಣಪ್ಪ ಬಿನ್ ಲೇ. ಹೊಸಣ್ಣ, ಅಗದೂರಪ್ಪ ಬಿನ್ ಲೇ. ಹೊಸಣ್ಣ | ಅಗದೂರಪ್ಪ, ಕೃಷ್ಣಪ್ಪ | **17/1** | ಖುಷ್ಕಿ | ನೋ.ಗೊಲ್ಲಹಳ್ಳಿ ಗಡಿ | ಸರ್ವೆ ನಂ.54 | ನೋ.ಗೊಲ್ಲಹಳ್ಳಿ ಗಡಿ | ಸರ್ವೆ ನಂ. 17/2 | **2.02** | 2.81 |
| 50. | ಗೌರಮ್ಮ ಕೋಂ ವೀರಭದ್ರಪ್ಪ | ಗೌರಮ್ಮ | **17/2** | ಖುಷ್ಕಿ | ನೋ.ಗೊಲ್ಲಹಳ್ಳಿ ಗಡಿ | ಸರ್ವೆ ನಂ.54 | ಸರ್ವೆ ನಂ. 17/1 | ಸರ್ವೆ ನಂ. 15,16 ಹಳ್ಳ | **2.12** | 3.16 |
| 51. | ಲಿಂಗಪ್ಪ ಬಿನ್ ಮುನಿಶ್ವರಯ್ಯ | ಲಿಂಗಪ್ಪ | **19** | ತರಿ | ಸರ್ವೆ ನಂ. 18 | ಸರ್ವೆ ನಂ. 20 | ಸರ್ವೆ ನಂ.15 | ಸರ್ವೆ ನಂ.18 | **0-07** | 0.34 |
| 52. | ಎ. ವೆಂಕಟಸ್ವಾಮಪ್ಪ ಬಿನ್ ಅಜ್ಜಪ್ಪ | ಎ. ವೆಂಕಟಸ್ವಾಮಪ್ಪ | **20/1** | ತರಿ | ಸರ್ವೆ ನಂ. 20/2 | ಸರ್ವೆ ನಂ. 14,21 | ಸರ್ವೆ ನಂ. 15 | ಸರ್ವೆ ನಂ. 29 | **0-06** | 0.29 |
| 53. | ಜಿ. ಅಂಜಿನಪ್ಪ ಬಿನ್ ಗೋವಿಂದಪ್ಪ | ಜಿ. ಅಂಜಿನಪ್ಪ | **20/2** | ತರಿ | ಸರ್ವೆ ನಂ. 20/3 | ಸರ್ವೆ ನಂ. 20/1 | ಸರ್ವೆ ನಂ. 15 | ಸರ್ವೆ ನಂ. 29 | **0-05** | 0.25 |
| 54. | ಜಿ. ಅಂಜಿನಪ್ಪ ಬಿನ್ ಗೋವಿಂದಪ್ಪ, ಗೋಪಾಲಪ್ಪ | ಜಿ. ಅಂಜಿನಪ್ಪ, ಗೋಪಾಲಪ್ಪ | **20/3** | ತರಿ | ಸರ್ವೆ ನಂ. 18,19 | ಸರ್ವೆ ನಂ. 20/2 | ಸರ್ವೆ ನಂ. 15 | ಸರ್ವೆ ನಂ. 29,18 | **0-07**<br>**01 (ಖ) ಬ** | 0.34 |
| 55. | ಕೆಂಚಪ್ಪ ಬಿನ್ ಮಾರಪ್ಪ | ಬಿ.ಕರಿಯಣ್ಣ, ಕೆಂಚಪ್ಪ | **21/1A** | ತರಿ | ಸರ್ವೆ ನಂ. 20 | ಸರ್ವೆ ನಂ. 22 | ಸರ್ವೆ ನಂ. 11,14 | ಸರ್ವೆ ನಂ.22 | **0.21** | 1.05 |
| 56. | ಮಾರಪ್ಪ ಬಿನ್ ಮುನಿಮಾರಪ್ಪ, ಅಗದೂರಪ್ಪ ಉ ಮರಿಯಪ್ಪ ಬಿನ್ ಮಾರಪ್ಪ | ಮಾರಪ್ಪ, ಅಗದೂರಪ್ಪ | **21/1B** | ತರಿ | ಸರ್ವೆ ನಂ.20 | ಸರ್ವೆ ನಂ.22 | ಸರ್ವೆ ನಂ.11,14 | ಸರ್ವೆ ನಂ.22 | **0.24** | 1.20 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 57. | ಮರಿಯಪ್ಪ ಉ ಕಾಕಣ್ಣ ಬಿನ್ ಲೇ. ಪೂಜಾರಿ ಚಿಕ್ಕಣ್ಣ, ಶೇಕಣ್ಣ ಉ ಮರಿಯಪ್ಪ | ಶೀತಣ್ಣ, ಮರಿಯಣ್ಣ | **21/2** | ತರಿ | ಸರ್ವೆ ನಂ.21/3 | ಸರ್ವೆ ನಂ.22 | ಸರ್ವೆ ನಂ.21/1 | ಸರ್ವೆ ನಂ.21/5 | **0.09** | 0.45 |
| 58. | ಕೆ.ಮುನಿಯಪ್ಪ ಬಿನ್ ಲೇ. ಕಾಕಣ್ಣ ಉ ಮರಿಯಪ್ಪ | ಕೆ.ಮುನಿಯಪ್ಪ | **21/3** | ತರಿ | ಸರ್ವೆ ನಂ. 21/4 | ಸರ್ವೆ ನಂ. 21/2 | ಸರ್ವೆ ನಂ. 21/1 | ಸರ್ವೆ ನಂ. 21/5 | **0.03** | 0.15 |
| 59. | ಕೆ.ಮುನಿಯಪ್ಪ ಬಿನ್ ಲೇ. ಕಾಕಣ್ಣ ಉ ಮರಿಯಪ್ಪ | ಕೆ.ಮುನಿಯಪ್ಪ | **21/4** | ತರಿ | ಸರ್ವೆ ನಂ. 20 | ಸರ್ವೆ ನಂ. 21/3 | ಸರ್ವೆ ನಂ. 21/1 | ಸರ್ವೆ ನಂ. 21/5 | **0.08** | 0.40 |
| 60. | ಸಿದ್ದಮ್ಮ ಕೋಂ ಅಜ್ಜಪ್ಪ | ಸಿದ್ದಮ್ಮ | **21/5** | ತರಿ | ಸರ್ವೆ ನಂ. 20,21/6,7,8 | ಸರ್ವೆ ನಂ. 22 | ಸರ್ವೆ ನಂ. 21/2.3.4 | ಸರ್ವೆ ನಂ. 22,21/6,8 | **0.22** | 1.10 |
| 61. | ಬಂಗಪ್ಪ ದೊಡ್ಡ ವೆಂಕಟರಾಮಯ್ಯ, ದೊಡ್ಡಚನ್ನಮುದ್ದಯ್ಯ | ದೊಡ್ಡ ವೆಂಕಟರಾಮಯ್ಯ, ಬಂಗಪ್ಪ ದೊಡ್ಡ ವೆಂಕಟರಾಮಯ್ಯ, ದೊಡ್ಡಚನ್ನಮುದ್ದಯ್ಯ | **21/6** | ತರಿ | ಸರ್ವೆ ನಂ. 21/8 | ಸರ್ವೆ ನಂ. 21/5 | ಸರ್ವೆ ನಂ. 21/5 | ಸರ್ವೆ ನಂ. 21/7 | **0.00.08** | 0.03 |
| 62. | ನಾಗುಂದಮ್ಮ ಬಿನ್ ಮುನಿಯಪ್ಪ, ಹೊಸಬಂಟಪ್ಪ | ಹೊಸಬಂಟಪ್ಪ, ನಾಗುಂದಮ್ಮ | **21/7** | ತರಿ | ಸರ್ವೆ ನಂ. 21/8 | ಸರ್ವೆ ನಂ. 21/5 | ಸರ್ವೆ ನಂ. 21/6 | ಸರ್ವೆ ನಂ. 21/8 | **0.00.08** | 0.03 |
| 63. | ಹೊಸಣ್ಣ ಬಿನ್ ಲೇ. ಹೊಸಬಂಟಪ್ಪ | ಹೊಸಣ್ಣ | **21/8** | ತರಿ | ಸರ್ವೆ ನಂ. 20 | ಸರ್ವೆ ನಂ. 21/5,6,7 | ಸರ್ವೆ ನಂ. 21/5 | ಸರ್ವೆ ನಂ. 29 | **0.03** | 0.15 |
| 64. | ಹೊಸಣ್ಣ ಬಿನ್ ಲೇ. ಹೊಸಬಂಟಪ್ಪ | ಹೊಸಣ್ಣ | **21/9** | ತರಿ | ಸರ್ವೆ ನಂ. 21/8 | ಸರ್ವೆ ನಂ. 21/5 | ಸರ್ವೆ ನಂ. 21/7 | ಸರ್ವೆ ನಂ. 28 | **0.01** | 0.50 |
| 65. | ಬಿ.ಮುನಿವೆಂಕಟಪ್ಪ | ಬಿ.ಮುನಿವೆಂಕಟಪ್ಪ | **22/1** | ತರಿ | ಸರ್ವೆ ನಂ. 21, | ಸರ್ವೆ ನಂ. 33 | ಸರ್ವೆ ನಂ. 10,11, | ಸರ್ವೆ ನಂ. 22/2 | **0.04** | 0.20 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ ಎ–ಗುಂ | ಆಕಾರ ರೂ.ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 66. | ಲಿಂಗಪ್ಪ ಬಿನ್ ಮುನಿಶ್ಯಾಮಪ್ಪ, ಶ್ರೀಮತಿ ಸಾವಿತ್ರಮ್ಮ ಕೋಂ ಮರಿಸ್ವಾಮಿರೆಡ್ಡಿ | ಲಿಂಗಪ್ಪ, ಶ್ರೀಮತಿ ಸಾವಿತ್ರಮ್ಮ | **22/2** | ತರಿ | ಸರ್ವೆ ನಂ. 21, | ಸರ್ವೆ ನಂ. 33 | ಸರ್ವೆ ನಂ. 22/1 | ಸರ್ವೆ ನಂ. 22/3,4,5, | **0.14**<br>**01 (ಖ)** ಬ | 0.70 |
| 67. | ರಾಜಮ್ಮ ಕೋಂ ಲೇ.ವೆಂಕಟರೆಡ್ಡಿ | ರಾಜಮ್ಮ | **22/3** | ತರಿ | ಸರ್ವೆ ನಂ. 22/4 | ಸರ್ವೆ ನಂ. 33 | ಸರ್ವೆ ನಂ. 22/2 | ಸರ್ವೆ ನಂ. 22/6 | **0.04** | 0.20 |
| 68. | ರಾಜಮ್ಮ ಕೋಂ ಲೇ.ವೆಂಕಟರೆಡ್ಡಿ | ರಾಜಮ್ಮ | **22/4** | ತರಿ | ಸರ್ವೆ ನಂ. 22/5 | ಸರ್ವೆ ನಂ. 22/3 | ಸರ್ವೆ ನಂ. 22/2 | ಸರ್ವೆ ನಂ. 22/6 | **0.04** | 0.20 |
| 69. | ಎಂ.ಚನ್ನಾಚೂಡಾಚಾರಿ ಬಿನ್ ಮಳ್ಳೆ ವೆಂಕಟರಮಣಚಾರಿ | ಎಂ.ಚನ್ನಾಚೂಡಾಚಾರಿ | **22/5** | ತರಿ | ಸರ್ವೆ ನಂ. 21, | ಸರ್ವೆ ನಂ. 22/4 | ಸರ್ವೆ ನಂ. 22/2 | ಸರ್ವೆ ನಂ. 22/6 | **0.03** | 0.15 |
| 70. | ಶ್ರೀಮತಿ ನಾಗಮ್ಮ ಬಿನ್ ತುಪ್ಪದ ರಾಮಣ್ಣ, ಎ.ಟಿ. ಕೃಷ್ಣಪ್ಪ | ಶ್ರೀಮತಿ ನಾಗಮ್ಮ, ಎ.ಟಿ. ಕೃಷ್ಣಪ್ಪ | **22/6** | ತರಿ | ಸರ್ವೆ ನಂ. 21, | ಸರ್ವೆ ನಂ. 33 | ಸರ್ವೆ ನಂ. 22/3,4,5 | ಸರ್ವೆ ನಂ. 22/7 | **0.07** | 0.35 |
| 71. | ಕೆ.ಮುನಿಯಪ್ಪ ಬಿನ್ ಲೇ. ಮರಿಯಪ್ಪ ಉ ಕಾಕಣ್ಣ | ಮರಿಯಪ್ಪ, ಕೆ.ಮುನಿಯಪ್ಪ ಬಿನ್ ಲೇ. ಮರಿಯಪ್ಪ ಉ ಕಾಕಣ್ಣ | **22/7A** | ತರಿ | ಸರ್ವೆ ನಂ. 21 | ಸರ್ವೆ ನಂ. 33 | ಸರ್ವೆ ನಂ. 22/6 | ಸರ್ವೆ ನಂ. 22/8,23 | **0.07** | 0.35 |
| 72. | ಎಂ.ಲಿಂಗಪ್ಪ ಬಿನ್ ಎಂ.ಮುನೇಶ್ವರಯ್ಯ | ಎಂ.ಲಿಂಗಪ್ಪ | **22/7B** | ತರಿ | ಸರ್ವೆ ನಂ. 21 | ಸರ್ವೆ ನಂ. 33 | ಸರ್ವೆ ನಂ. 22/6 | ಸರ್ವೆ ನಂ. 22/8,23 | **0.07** | 0.35 |
| 73. | ಅಗದೂರಪ್ಪ ಬಿನ್ ಲೇ. ಮುನಿಯಪ್ಪ | ಮುನಿಯಪ್ಪ, ನಾಗಪ್ಪ, ಅಗದೂರಪ್ಪ | **22/8** | ತರಿ | ಸರ್ವೆ ನಂ. 29 | ಸರ್ವೆ ನಂ. 23 | ಸರ್ವೆ ನಂ. 22/7,21 | ಸರ್ವೆ ನಂ. 26 | **0.15** | 0.75 |
| 74. | ಪುಟ್ಟರಾಜಮ್ಮ ಕೋಂ ಪೂಜಾರಿ ಮರಿಯಪ್ಪ, ಎಂ.ಲಿಂಗಪ್ಪ ಬಿನ್ ಲೇ. ಮುನೇಶ್ವರಯ್ಯ | ಪುಟ್ಟರಾಜಮ್ಮ, ಎಂ.ಲಿಂಗಪ್ಪ | **23/1** | ತರಿ | ಸರ್ವೆ ನಂ. 26 | ಸರ್ವೆ ನಂ. 24 | ಸರ್ವೆ ನಂ. 22 | ಸರ್ವೆ ನಂ. 23/2 | **0.31**<br>**0.01 (ಖ)** ಬ | 1.47 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಒಟ್ಟು ವಿಸ್ತೀರ್ಣ | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಎ–ಗುಂ | ರೂ.ಪೈ |
| 75. | ಎಂ.ಲಿಂಗಪ್ಪ ಬಿನ್ ಲೇ. ಮುನೇಶ್ವರಯ್ಯ | ಎಂ.ಲಿಂಗಪ್ಪ | **23/2** | ತರಿ | ಸರ್ವೆ ನಂ. 26 | ಸರ್ವೆ ನಂ. 24 | ಸರ್ವೆ ನಂ. 23/1 | ಸರ್ವೆ ನಂ. 25 | **0.17** | 0.81 |
| 76. | ಸಾವಿತ್ರಮ್ಮ ಕೋಂ ಮರಿಸ್ವಾಮಿರೆಡ್ಡಿ | ಸಾವಿತ್ರಮ್ಮ | **25/1** | ತರಿ | ಸರ್ವೆ ನಂ. 30 | ಸರ್ವೆ ನಂ. 24,25/3,4 | ಸರ್ವೆ ನಂ. 26 | ಸರ್ವೆ ನಂ. 31 | **0.04**<br>**0.01 (ಖ) ಬ** | 0.19 |
| 77. | ಸಾವಿತ್ರಮ್ಮ ಕೋಂ ಮರಿಸ್ವಾಮಿರೆಡ್ಡಿ | ಸಾವಿತ್ರಮ್ಮ | **25/2A** | ತರಿ | ಸರ್ವೆ ನಂ. 25/1 | ಸರ್ವೆ ನಂ. 225/3 | ಸರ್ವೆ ನಂ. 26 | ಸರ್ವೆ ನಂ. 25/2B | **0.01.08** | 0.09 |
| 78. | ಸಾವಿತ್ರಮ್ಮ ಕೋಂ ಮರಿಸ್ವಾಮಿರೆಡ್ಡಿ | ಸಾವಿತ್ರಮ್ಮ | **25/2B** | ತರಿ | ಸರ್ವೆ ನಂ. 25/1 | ಸರ್ವೆ ನಂ. 25/4 | ಸರ್ವೆ ನಂ. 25/2A | ಸರ್ವೆ ನಂ. 31 | **0.02.08** | 0.13 |
| 79. | ಸಾವಿತ್ರಮ್ಮ ಬಿನ್ ಮರಿಸ್ವಾಮಿರೆಡ್ಡಿ | ಸಾವಿತ್ರಮ್ಮ | **25/3** | ತರಿ | ಸರ್ವೆ ನಂ. 25/2A | ಸರ್ವೆ ನಂ. 25/5 | ಸರ್ವೆ ನಂ. 26 | ಸರ್ವೆ ನಂ. 25/4 | **0.02** | 0.10 |
| 80. | ಮಹದೇವಮ್ಮ ಕೋಂ ವೀರಭದ್ರಪ್ಪ | ಮಹದೇವಮ್ಮ | **25/4** | ತರಿ | ಸರ್ವೆ ನಂ. 25/2B | ಸರ್ವೆ ನಂ. 25/5 | ಸರ್ವೆ ನಂ. 25/3 | ಸರ್ವೆ ನಂ. 31 | **0.03** | 0.18 |
| 81. | ಎಂ.ಚನ್ನಚೂಡಚಾರಿ ಬಿನ್ ಮಳ್ಳೆ ವೆಂಕಟರಮಣಚಾರಿ | ಎಂ.ಚನ್ನಚೂಡಚಾರಿ | **25/5** | ತರಿ | ಸರ್ವೆ ನಂ. 25/3,4 | ಸರ್ವೆ ನಂ. 25/6 | ಸರ್ವೆ ನಂ. 26 | ಸರ್ವೆ ನಂ. 31 | **0.03** | 0.15 |
| 82. | ಹೊಸಣ್ಣ ಬಿನ್ ಲೇ. ಹೊಸಬಂಟಪ್ಪ, ವೀರಭದ್ರಪ್ಪ | ವೀರಭದ್ರಪ್ಪ, ಹೊಸಣ್ಣ | **25/6** | ತರಿ | ಸರ್ವೆ ನಂ. 25/5 | ಸರ್ವೆ ನಂ. 24 | ಸರ್ವೆ ನಂ. 23, | ಸರ್ವೆ ನಂ. 31 | **0.13**<br>**0.02 (ಖ) ಬ** | 0.62 |
| 83. | ಗೋವಿಂದಪ್ಪ | ಗೋವಿಂದಪ್ಪ | **26/1** | ತರಿ | ಸರ್ವೆ ನಂ. 26/9 | ಸರ್ವೆ ನಂ. 23 | ಸರ್ವೆ ನಂ. 22 | ಸರ್ವೆ ನಂ. 26/2 | **0.04** | 0.19 |
| 84. | ಶ್ರೀನಿವಾಸ ಬಿನ್ ಜೀಯಪ್ಪ | ಜಯಪ್ಪ, ಶ್ರೀನಿವಾಸ | **26/2** | ತರಿ | ಸರ್ವೆ ನಂ. 22 | ಸರ್ವೆ ನಂ. 23 | ಸರ್ವೆ ನಂ. 26/9,1 | ಸರ್ವೆ ನಂ. 26/3 | **0.06** | 0.29 |
| 85. | ಲಿಂಗಪ್ಪ ಬಿನ್ ಸಂಪಯ್ಯ, ಶ್ರೀಮತಿ ಸಾವಿತ್ರಮ್ಮ ಬಿನ್ ಮರಿಸ್ವಾಮಿರೆಡ್ಡಿ | ಲಿಂಗಪ್ಪ, ಶ್ರೀಮತಿ ಸಾವಿತ್ರಮ್ಮ | **26/3** | ತರಿ | ಸರ್ವೆ ನಂ. 22 | ಸರ್ವೆ ನಂ. 23 | ಸರ್ವೆ ನಂ. 26/2 | ಸರ್ವೆ ನಂ. 26/4 | **0.07** | 0.34 |

